CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೨೪, ೨೦೦೫ ( ಚೈತ್ರ ೩, ಶಕ ವರ್ಷ ೧೯೨೬) | ಸಂಚಿಕೆ ೧೨ |
|---|---|---|



## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/114/ಡಿಟಿಸಿಆರ್/98-99, ದಿನಾಂಕ: 2ನೇ ಫೆಬ್ರವರಿ 2005**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು** — **ವಿರುದ್ಧ** — **ಆರೋಪಿಗಳು**

ಅಬಕಾರಿ ಉಪ ನಿರೀಕ್ಷಕರು,
ನಂ.3 ಇ.ಐ.ಬಿ. ಮಂಗಳೂರು ವಿಭಾಗ,
ಮಂಗಳೂರು.

1) ಅಂತೋನಿ ಬಿನ್ ರಾಜು, ರಂಗನಾಥಪುರ, ಮಾಗಡಿ ಮುಖ್ಯರಸ್ತೆ, ಬೆಂಗಳೂರು-79.
2) ಅನ್‌ಬರ್‌ಸನ್ ಬಿನ್ ನಾಗರಾಜ, ಡೋರ್ ನಂ.7, ಬಿ.ಹೆಚ್.ಇ.ಎಲ್.ನ ಸಮೀಪ ದೇವರಾಯನಪುರ, ಮೈಸೂರು ರಸ್ತೆ, ಬೆಂಗಳೂರು.

**ಅರ್ಜಿದಾರರು:**
ಶ್ರೀ ಕೆ.ಎಂ. ಮಹೇಂದ್ರ, ಸಿ.ಕೆ. ಮಹದೇವ, ನಂ.27, 1ನೇ ಮೈನ್, ಸಿ ಕ್ರಾಸ್, ಗುಡ್ಡದ ಹಳ್ಳಿ, ಮೈಸೂರು ರಸ್ತೆ, ಬೆಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 9.8.98 ರಂದು ಬಂಟ್ವಾಳ ತಾಲ್ಲೂಕು ಕಲ್ಲಡ್ಕದಲ್ಲಿ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ವಿಟ್ಲ ಕ್ರಾಸ್ ಬಳಿ ಫಿರ್ಯಾದುದಾರರು ಶಂಕಿತ ವಾಹನಗಳನ್ನು ತಪಾಸಣೆ ಮಾಡುತ್ತಿರುವಾಗ, ಬೆಂಗಳೂರು ಕಡೆಯಿಂದ ಬಿ.ಸಿ. ರೋಡು ಕಡೆಗೆ ಒಂದು ಟಾಟಾ ಲಾರಿ ಸಂಖ್ಯೆ: ಕೆಎ-13-ಬಿ-3551 ಬರುತ್ತಿದ್ದು, ಸದರಿ ಲಾರಿಯನ್ನು ತಪಾಸಣೆ ಮಾಡುವ ಬಗ್ಗೆ ಸಿಬ್ಬಂದಿಯವರು ನಿಲ್ಲಿಸಲು ಸೂಚಿಸಿದಾಗ, ಸದರಿ ಲಾರಿಯ ಚಾಲಕ ವಾಹನವನ್ನು ನಿಲ್ಲಿಸಿದಾಗ ಅವನಲ್ಲಿ ಪ್ರಶ್ನಿಸಿದಾಗ, ಲಾರಿಯಲ್ಲಿ ಯಾವುದೇ ಸರಕು ಇಲ್ಲವೆಂದು ನುಡಿದಿರುತ್ತಾನೆ. ನಂತರ ಅನುಮಾನದ ಮೇರೆಗೆ ಜಪ್ತಿ ಮಾಡುವ ಬಗ್ಗೆ ಚಾಲಕನಿಗೆ ವಿಷಯ ತಿಳಿಸಿ, ನ್ಯಾಯಾಲಯದಿಂದ ವಾರೆಂಟ್ ಪಡೆದುಕೊಳ್ಳಲು ಕಾಲಾವಕಾಶವಿಲ್ಲದ ಕಾರಣ ಅಬಕಾರಿ ಅಧಿಕಾರಿಗಳು ಸ್ವತಂತ್ರ ಸಾಕ್ಷಿಗೆ ಪ್ರಯತ್ನಿಸಿ, ರಾತ್ರಿ ವೇಳೆಯಾದುದರಿಂದ ಯಾರು ದೊರೆಯದ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿ ಬರಮಾಡಿಕೊಂಡು, ಸದರಿ ಲಾರಿಯನ್ನು ಪರಿಶೀಲಿಸಿದಾಗ ಅದರೊಳಗೆ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂತು. ಸದರಿ ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ಸಾಗಾಣಿಕೆ ಮಾಡಲು ರಹದಾರಿ ಪತ್ರ ಅಥವಾ ಇತರ ದಾಖಲಾತಿಗಳು ಇದ್ದೆಯೇ ಎಂದು ವಿಚಾರಿಸಿದಾಗ, ತನ್ನ ಬಳಿ ಯಾವುದೇ ದಾಖಲಾತಿಗಳು ಇಲ್ಲವೆಂದು ಚಾಲಕನು ನುಡಿದಿರುತ್ತಾನೆ. ನಂತರ ಸದರಿ ಮದ್ಯವನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಅವುಗಳು ಈ ಕೆಳಗಿನಂತಿರುತ್ತದೆ.

| ಕ್ರ. ಸಂ. | ಮದ್ಯದ ವಿವರ | 750 ಎಂಎಲ್ (ಸೀಸೆಗಳಲ್ಲಿ) | 180 ಎಂಎಲ್ (ಸೀಸೆಗಳಲ್ಲಿ) | ಪೆಟ್ಟಿಗೆ | ಲೀಟರುಗಳಲ್ಲಿ |
|---|---|---|---|---|---|
| 1 | ವೈಟ್ ಫೀಲ್ಡ್ ವಿಸ್ಕಿ | 324 | 3840 | 107 | 934.200 |

ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 750 ಎಂಎಲ್‌ನ 1 ಸೀಸೆ ಮತ್ತು 180 ಎಂಎಲ್‌ನ 1 ಸೀಸೆಯನ್ನು ತೆಗೆದು ಅವುಗಳ ಮುಚ್ಚಳಗಳ ಮೇಲೆ ಬಟ್ಟೆ ದಾರ ಕಟ್ಟಿ, ಇಲಾಖಾ ಸೀಲಿನಿಂದ ಸೀಲು ಮಾಡಿರುತ್ತಾರೆ. ಚಾಲಕ ಹಾಗೂ ಸಹಾಯಕನ ಹೆಸರು ಮತ್ತು ವಿಳಾಸವನ್ನು ಕೇಳಲಾಗಿ ಚಾಲಕ ಅಂತೋನಿ ಬಿನ್ ರಾಜು (42 ವರ್ಷ) 72, ರಂಗನಾಥಪುರ, ಮಾಗಡಿ ಮುಖ್ಯರಸ್ತೆ, ಬೆಂಗಳೂರು-79 ಮತ್ತು ಸಹಾಯಕ ಅನ್‌ಬರಸನ್ ಬಿನ್ ನಾಗರಾಜ, ಡೋರ್ ನಂ.7, ಬಿ.ಹೆಚ್.ಇ.ಎಲ್. ಸಮೀಪ, ಬಾಪೂಜಿ ನಗರ, ದೇವರಾಯನಪುರಂ, ಮೈಸೂರು ರಸ್ತೆ,

ಬೆಂಗಳೂರು ಎಂದು ತಿಳಿಸಿರುತ್ತಾರೆ. ಸದರಿ ಲಾರಿಯನ್ನು ಪರಿಶೀಲಿಸಿದಾಗ, ವಾಹನ ನೋಂದಣಿ ಸಂಖ್ಯೆ: ಕೆಎಲ್-13-ಬಿ-3551 ಆಗಿದ್ದು, ಟಾಟಾ 709 ಲಾರಿ ಆಗಿರುತ್ತದೆ. ಇದರ ಛಾಸೀಸ್ ನಂಬರ್ ಮತ್ತು ಇಂಜಿನ್ ನಂಬರನ್ನು ಪರಿಶೀಲಿಸಿ ಮಹಜರಿನಲ್ಲಿ ನಮೂದಿಸಿರುತ್ತಾರೆ. ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿರುತ್ತಾರೆ. ಇದು ಅಕ್ರಮ ಮದ್ಯ ಸಾಗಾಣಿಕೆ ಆಗಿರುವುದರಿಂದ ಮತ್ತು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 (2)ರ ಪ್ರಕಾರ ಅಪರಾಧವಾಗಿದ್ದು ಮತ್ತು ಕಲಂ 34,38(ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 2/98-99 ದಿನಾಂಕ: 9.8.98 ರಂದು ಮೊಕದ್ದಮೆ ದಾಖಲಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಹಾಗೂ ಮಾನ್ಯ ನ್ಯಾಯಾಲಯಕ್ಕೆ ವರದಿ ಸಲ್ಲಿಸಿರುತ್ತಾರೆ. ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರಿಗೆ ಪ್ರಾಧಿಕಾರದ ಅನುಮತಿಯೊಂದಿಗೆ ಹಸ್ತಾಂತರಿಸಿರುತ್ತಾರೆ.

ವಾಹನದ ಆರ್.ಸಿ. ಮಾಲೀಕರಾದ ಶ್ರೀ ಕೆ.ಎಂ. ಮಹೇಂದ್ರ ಬಿನ್ ಸಿ.ಕೆ. ಮಹದೇವ ನಂ.27, 1ನೇ ಮೈನ್ 'ಸಿ' ಕ್ರಾಸ್, ನಿಯರ್ ಗುಡ್ಡದಹಳ್ಳಿ, ಮೈಸೂರು ರೋಡ್, ಬೆಂಗಳೂರುರವರು ತಮ್ಮ ವಕೀಲರ ಮೂಲಕ ಈ ಪ್ರಾಧಿಕಾರಕ್ಕೆ ದಿನಾಂಕ: 18.8.98 ರಂದು ಅರ್ಜಿ ಸಲ್ಲಿಸಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂಖ್ಯೆ: ಕೆಎಲ್-13-ಬಿ-3551ನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರಾದ ಶ್ರೀ ಕೆ.ಎಂ. ಮಹೇಂದ್ರರವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 31.8.98 ರಂದು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ರಂತೆ ಕಾರಣ ಕೇಳಿ ನೋಟೀಸು ನೀಡಲಾಗಿರುತ್ತದೆ. ಸದರಿ ಕಾರಣ ಕೇಳಿ ನೋಟೀಸಿಗೆ ಅರ್ಜಿದಾರರು ತಮ್ಮ ವಕೀಲರ ಮುಖಾಂತರ ಉತ್ತರವನ್ನು ದಿನಾಂಕ: 9.9.98 ರಂದು ಸಲ್ಲಿಸಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ:114:ಡಿಟಿಸಿಆರ್: 98-99, ದಿನಾಂಕ: 9.9.98ರ ಆದೇಶದಲ್ಲಿ ವಾಹನದ ಮೌಲ್ಯದ ಅನುಗುಣವಾಗಿ ರೂ.65,000/- ಬ್ಯಾಂಕ್ ಗ್ಯಾರಂಟಿ ಹಾಗೂ 1,25,000/- ಇಂಡೆಮಿನಿಟಿ ಬಾಂಡನ್ನು ಮತ್ತು ಅಷ್ಟೇ ಮೊತ್ತಕ್ಕೆ ಸಮಾನವಾದ ಒಬ್ಬ ಜಮೀನುದಾರರನ್ನು ನೀಡಿದ್ದಲ್ಲಿ ವಶಪಡಿಸಿಕೊಂಡ ಟಾಟಾ-709 ಲಾರಿ ಸಂಖ್ಯೆ: ಕೆಎಲ್-13-ಎ-3551ನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿರುತ್ತಾರೆ. ಸದರಿ ಆದೇಶದ ಅನುಸಾರ ಅರ್ಜಿದಾರರು ತಮ್ಮ ವಕೀಲರ ಮೂಲಕ ರೂ.65,000/- ಬ್ಯಾಂಕ್ ಗ್ಯಾರಂಟಿ ಮತ್ತು ರೂ.1,25,000/- ಇಂಡೆಮಿನಿಟ್ ಬಾಂಡ್ ಮತ್ತು ಅಷ್ಟೇ ಮೊತ್ತಕ್ಕೆ ಸಮನಾದ ಜಮೀನುದಾರರಾದ ಶ್ರೀ ಕೆ. ವೆಂಕಪ್ಪ ಪೂಜಾರಿ, ಬಿನ್ ಐತ್ತಪ್ಪ ಪೂಜಾರಿ, ವಾಸ: ಬೆಂಕ್ಯ ಹೌಸ್, ಸಜೀಪ ಗ್ರಾಮ ಬಂಟ್ವಾಳ ರವರ ಆರ್.ಟಿ.ಸಿ. ಯೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 19.9.98 ರಲ್ಲಿ ವಶಪಡಿಸಿಕೊಂಡ ಲಾರಿ-709 ಕೆಎಲ್-13-ಬಿ-3551ನ್ನು ಅದರ ಆರ್.ಸಿ. ಮಾಲೀಕರಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರ ಪತ್ರ ಸಂಖ್ಯೆ: 5/98-99, ದಿನಾಂಕ: 19.9.98ರ ತನಿಖಾ ವರದಿಯಲ್ಲಿ ವಶಪಡಿಸಿಕೊಂಡ 934.200 ಲೀಟರು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿನಾಂಕ: 6.10.98 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಫಿರ್ಯಾದಿ, ತನಿಖಾಧಿಕಾರಿ ಹಾಗೂ ಇನ್ನಿತರ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿದೆ. ಹಾಗೂ ಪ್ರಕರಣದಲ್ಲಿ ಪ್ರತಿ ರಕ್ಷಾಪರ ಯಾವುದೇ ಸಾಕ್ಷಿ ಹಾಗೂ ವಾಹನ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಿ ಯಾವುದೇ ಸಾಕ್ಷಿಗಳನ್ನು ಸಲ್ಲಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 9.8.98 ರಂದು ಟಾಟಾ 709 ಲಾರಿ ಸಂಖ್ಯೆ: ಕೆಎಲ್:13-ಬಿ 3551 ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಣಿಕೆ ಮಾಡಲಾಗಿತ್ತೇ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕರು ತಾವೆಂದೂ ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?

3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲೆಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

1) ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-1:**

ಶ್ರೀ ಯು. ಪ್ರಭಾಕರ್, ಅಬಕಾರಿ ಉಪ ನಿರೀಕ್ಷಕರು, ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 8.1.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ತಾನು ದಿನಾಂಕ: 9.8.98 ರಂದು ಮುಂಜಾನೆ 2.00 ಗಂಟೆ ಸಮಯದಲ್ಲಿ ಬಂಟ್ವಾಳ ತಾಲ್ಲೂಕು, ಕಲ್ಲಡ್ಕ ಎಂಬಲ್ಲಿ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ವಿಟ್ಲ ಕ್ರಾಸ್ ಬಳಿ ಅಬಕಾರಿ ಉಪ ಅಧೀಕ್ಷಕರು, ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರ ನೇತೃತ್ವದಲ್ಲಿ ಸಿಬ್ಬಂದಿಯೊಂದಿಗೆ ರಸ್ತೆಗಾವಲು ಮಾಡಿ. ಶಂಕಿತ ವಾಹನವನ್ನು ತಪಾಸಣೆ ಮಾಡುತ್ತಿದ್ದ ಸಮಯ ಸುಮಾರು 2.00 ಗಂಟೆ ಸಮಯದಲ್ಲಿ ಬೆಂಗಳೂರು ಕಡೆಯಿಂದ ಒಂದು ವಾಹನ ಟಾಟಾ ಕೆಎಲ್-13ಬಿ-3551ನ್ನು ಬೆಂಗಳೂರಿನಿಂದ ಮಂಗಳೂರಿಗೆ ಬರುತ್ತಿದ್ದು, ಅದನ್ನು ಸಿಬ್ಬಂದಿಯವರು ತಪಾಸಣೆ ಮಾಡಲು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಲಾರಿಯನ್ನು ನಿಲ್ಲಿಸಿದನು, ಸದ್ರಿ ವಾಹನದೊಳಗೆ ಏನಿದೆ ಎಂಬುದಾಗಿ ಕೇಳಿದಾಗ ಲಾರಿ ಖಾಲಿ ಎಂದು ಚಾಲಕ ತಿಳಿಸಿದನು. ಸಂಶಯದಿಂದ ಲಾರಿಯ ಕ್ಯಾರಿಯರನ್ನು ಪರಿಶೀಲಿಸಿದಾಗ, ಕ್ಯಾರಿಯರ್‌ನಲ್ಲಿ 21/2 ಅಡಿ ಅಗಲ ಮತ್ತು 6 ಅಡಿ ಎತ್ತರ ಎಂದು ಪಾರ್ಟಿಶನ್ ಇದ್ದು, ಅದಕ್ಕೆ ಕಬ್ಬಿಣದ ತಗಡನ್ನು ಹೊದಿಸಿದ್ದು, ಅದನ್ನು ನೆಟ್‌ಬೋಲ್ಟ್‌ಗಳಿಂದ ಜೋಡಿಸಲಾಗಿತ್ತು. ಅದನ್ನು ಬಿಚ್ಚಿ ನೆಟ್ ಬೋಲ್ಟ್ ತೆಗೆದುಕೊಂಡು ನೋಡಿದಾಗ ಮದ್ಯದ ರಟ್ಟಿನ ಪೆಟ್ಟಿಗೆಗಳಿರುವುದು ಕಂಡುಬಂತು. ಸದ್ರಿ ಮದ್ಯದ ಪೆಟ್ಟಿಗೆಗಳನ್ನು ತೆಗೆದು ಎಣಿಕೆ ಮಾಡಿದಾಗ 107 ರಟ್ಟಿನ ಪೆಟ್ಟಿಗೆಗಳು ಇದ್ದು 750 ಎಂಎಲ್‌ನ 27 ಪೆಟ್ಟಿಗೆ ಮತ್ತು 180 ಎಂಎಲ್ 80 ಪೆಟ್ಟಿಗೆಗಳು ಇದ್ದು, ವೈಟ್ ಫೀಲ್ಡ್ ವಿಸ್ಕಿ ಎಂದು ಬರೆದಿತ್ತು. ಇದನ್ನು ಬೆಂಗಳೂರಿನಿಂದ ಮಂಗಳೂರಿಗೆ ಸಾಗಾಣಿಕೆ ಮಾಡಲಾಗುತ್ತಿದ್ದು, ಕಂಕನಾಡಿ ಪೆಟ್ರೋಲ್ ಪಂಪ್‌ನ ಬಳಿ ಅದಕ್ಕೆ ಸಂಬಂಧಿಸಿದವರು ಮದ್ಯವನ್ನು ತೆಗೆದುಕೊಂಡು ಹೋಗುತ್ತಾರೆಂಬುದಾಗಿ ತನಗೆ ಡಿಸ್ಟಿಲರಿಯವರು ತಿಳಿಸಿರುತ್ತಾರೆ. ಸದರಿ ಮದ್ಯವನ್ನು ಸಾಗಾಟ ಮಾಡಲು ಯಾವುದೇ ರಹದಾರಿ ಪತ್ರವಿಲ್ಲವೆಂದು ತಿಳಿಸಿರುತ್ತಾರೆ. ಸದರಿ ಮದ್ಯದ

ಸೀಸೆಗಳ ಮೇಲೆ ಲೋಹದ ಮುಚ್ಚಳದಿಂದ ಯಾಂತ್ರಿಕವಾಗಿ ಮುಚ್ಚಳ ಹಾಕಿದ್ದು ಚೀಟಿಗಳನ್ನು ಅಂಟಿಸುವ ಲೇಬಲ್‌ನಲ್ಲಿ ಮದ್ಯವು ಕರ್ನಾಟಕ ರಾಜ್ಯದಲ್ಲಿ ಮಾತ್ರ ಎಂದು ಬರೆದಿರುತ್ತದೆ. ಹಾಗೂ ಮದ್ಯದ ಸೀಸೆಗಳ ಮೇಲೆ ಅಬಕಾರಿ ಭದ್ರತಾ ಚೀಟಿಗಳನ್ನು ಅಂಟಿಸಿರುತ್ತಾರೆ. ಕ್ಯಾಬಿನಿನ ಒಳಗಡೆ ಇದ್ದ ಕ್ಲೀನರ್ ಹಾಗೂ ಚಾಲಕನ ಹೆಸರು, ವಿಳಾಸ ವಿಚಾರಿಸಲಾಗಿ ಆ್ಯಂಟನಿ ಬಿನ್ ರಾಜು, ರಂಗನಾಥಪುರ, ಮಾಗಡಿ ಮುಖ್ಯ ರಸ್ತೆ, ಬೆಂಗಳೂರು ಹಾಗೂ ಅನ್‌ಬರ್‌ಸನ್ ಬಿನ್ ನಾಗರಾಜು ಡೋರ್ ನಂ.7, ಬಿ.ಹೆಚ್.ಇ.ಎಲ್. ಸಮೀಪ, ಬಾಪೂಜಿನಗರ, ಮೈಸೂರು ರಸ್ತೆ, ಬೆಂಗಳೂರು ಎಂದು ತಿಳಿಸಿರುತ್ತಾರೆ. ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರುರವರ ದಾಖಲಾತಿಗಳ ಪ್ರಕಾರ ವಾಹನದ ನೊಂದಣಿ ಮಾಲೀಕ ಕೆ.ಎಂ. ಮಹೇಂದ್ರ ಬಿನ್ ಸಿ.ಕೆ. ಮಹಾದೇವ ನಂ.27/ 1ನೇ ಮೈನ್ "ಸಿ" ಕ್ರಾಸ್, ನ್ಯೂ ಗುಡ್ಡದಹಳ್ಳಿ, ಮೈಸೂರು ರಸ್ತೆ, ಬೆಂಗಳೂರು ಎಂದು ತಿಳಿಸಿರುತ್ತಾರೆ. ಮೇಲ್ಕಂಡ ದಾಖಲಾತಿ ಹಾಗೂ ವಾಹನಗಳನ್ನು ಪರಿಶೀಲಿಸಲಾಗಿ ವಾಹನ ನೋಂದಣಿ ಸಂಖ್ಯೆ: ಕೆಎಲ್-13-ಬಿ-3151 ಆಗಿದ್ದು ಇದ್ದು ಟಾಟಾ-709 ಲಾರಿ ಆಗಿದ್ದು 1995ನೇ ಮಾದರಿಯಾಗಿರುತ್ತದೆ. ರಾಸಾಯನಿಕ ಪರೀಕ್ಷೆಗಾಗಿ ಸದ್ರಿ ಮದ್ಯದ ಪೆಟ್ಟಿಗೆಗಳಿಂದ 750 ಎಂಎಲ್‌ನ ಒಂದು ಹಾಗೂ 180 ಎಲ್‌ಎಲ್‌ನ ಒಂದೊಂದರಂತೆ 2 ಸೀಸೆಗಳನ್ನು ತೆಗೆದು ಅವುಗಳಿಗೆ ಬಟ್ಟೆ ದಾರದಿಂದ ಕಟ್ಟಿ ಮಾದರಿ ಸೀಲನ್ನು ತಯಾರಿಸಿರುತ್ತಾರೆ. ಆರೋಪಿಗಳ ವಿವರ ಹಾಗೂ ವಿಳಾಸವಿರುವ ಚೀಟಿಗಳನ್ನು ಮಾದರಿ ಸೀಸೆಗಳಿಗೆ ಅಂಟಿಸಿರುತ್ತಾರೆ. ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿರುತ್ತಾರೆ. ಆರೋಪಿಗಳನ್ನು ಹಾಗೂ ಸೊತ್ತುಗಳನ್ನು ವಶಕ್ಕೆ ತೆಗೆದುಕೊಂಡು ಅವರ ಕಛೇರಿಗೆ ತಂದು ಮೊಕದ್ದಮೆ ದಾಖಲಿಸಿ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಮೇಲಾಧಿಕಾರಿಗಳಿಗೆ ಹಾಗೂ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ಸೊತ್ತುಗಳನ್ನು ವಶಪಡಿಸಿಕೊಂಡ ಬಗ್ಗೆ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳುರುರವರಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಅದನ್ನು ನಿಶಾನೆ-ಪಿ-1 ಎಂದು ಹಾಗೂ ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ-1(ಎ) ಎಂದು ಗುರುತಿಸಿರುತ್ತಾರೆ. ಪ್ರಥಮ ಮಾಹಿತಿಯ ಪ್ರತಿಯನ್ನು ನಿಶಾನೆ ಪಿ-2 ಎಂದು, ಮಹಜರ್‌ನ ಛಾಯಾ ಪ್ರತಿಯನ್ನು ನಿಶಾನೆ ಪಿ-3 ಎಂದು ಗುರುತಿಸಿರುತ್ತಾರೆ. ವಾಹನವನ್ನು ತಪಾಸಣೆ ಮಾಡುವ ಮೊದಲು ಜೆ.ಎಂ.ಎಫ್.ಸಿ. ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ, ಈ ಕುರಿತು ಕಾರಣವನ್ನು ನಮೂದಿಸಿ ಒಂದು ಮೆಮೋವನ್ನು ತಯಾರಿಸಿದ್ದು, ಸದರಿ ಮೆಮೋವನ್ನು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ಮೆಮೋದ ಪ್ರತಿಯನ್ನು ನಿಶಾನೆ ಪಿ-4 ಎಂದು ಗುರುತಿಸಲಾಗಿದೆ.

ಅರ್ಜಿದಾರರ ಪರ ಪಾಟಿ ಸವಾಲಿಗೆ ಉತ್ತರಿಸುತ್ತಾ ಆ ದಿವಸ ತನಗೆ ಖಚಿತ ವರ್ತಮಾನವಿರಲಿಲ್ಲ. ತಾನು ರಸ್ತೆಗಾವಲು ನಡೆಸಿದ್ದೆ. ತಕ್ಷೀರು ಸ್ಥಳವು ತನ್ನ ಕಛೇರಿಯಿಂದ 30 ಕಿ.ಮೀ. ದೂರವಿದೆ. ತಕ್ಷೀರು ಸ್ಥಳದಲ್ಲಿ ಸದರಿ ವಾಹನ ಬಿಟ್ಟು ಬೇರೆ ವಾಹನವನ್ನು ಪರಿಶೀಲಿಸಲಿಲ್ಲ. ತಕ್ಷೀರು ಸ್ಥಳಕ್ಕೆ ಸದರಿ ದಿನಾಂಕದಂದು ಸುಮಾರು 2 ಗಂಟೆ ಮುಂಜಾನೆಗೆ ತಲುಪಿರುತ್ತೇನೆ. ಸದರಿ ಲಾರಿಯನ್ನು ನಿಲ್ಲಿಸಲು ನಾನು ಸಿಗ್ನೆಲ್ ಕೊಟ್ಟಿರುತ್ತೇನೆ. ಸದರಿ ಲಾರಿಯ ಚಾಲಕರಾಗಲೀ ಇತರರಾಗಲೀ ತಕ್ಷೀರು ಸ್ಥಳದಲ್ಲಿ ಇರಲಿಲ್ಲ. ತನಗೆ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ತರಲು ಸಮಯವಕಾಶವಿಲ್ಲದ ಕಾರಣ ಸದರಿ ಲಾರಿಯನ್ನು ಪರಿಶೋಧಿಸಲು ಮುಂದೆ ತರಿಸಿಕೊಂಡಿರುವುದಿಲ್ಲ. ಸರ್ಚ್ ಲೀಸ್ಟನ್ನು ಸ್ಥಳದಲ್ಲಿಯೇ ತಯಾರಿಸಿದ್ದೇನೆ. ತಕ್ಷೀರು ಸ್ಥಳ ಅಂದರೆ ಕಲ್ಲಡ್ಕ ಜಂಕ್ಷನ್ ರಾತ್ರಿ ಕೂಡಾ ಜನಸಂಖ್ಯೆ ಇರುವ ಸ್ಥಳವೆಂದರೆ ಸರಿಯಲ್ಲ. ತಕ್ಷೀರು ಸ್ಥಳದಲ್ಲಿ ರಾತ್ರಿ ಪೊಲೀಸರು ಗಸ್ತು ಕಾಯುತ್ತಿರುತ್ತಾರೆ ಎಂದರೆ ಸರಿಯಲ್ಲ. ತಕ್ಷೀರು ಸ್ಥಳದ ಹತ್ತಿರ ಮನೆ ಇದೆ ಎಂದರೆ ಸರಿಯಲ್ಲ. ಸದರಿ ಮಹಜರನ್ನು ತನ್ನ ಕೈ ಬರಹದಲ್ಲಿದ್ದೆ ಪ್ರಕರಣಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಕಛೇರಿಯಲ್ಲಿಯೇ ಕುಳಿತು ತಯಾರಿಸಿದ್ದೇನೆಂದರೆ ಸರಿಯಲ್ಲ. ವಾಹನದ ಮಾಲೀಕರನ್ನು ಮಾಲೀಕರ ಹೆಸರು ದಾಖಲಾತಿ ಕಂಡು ಬಂದಿರುವುದರಿಂದ ಅವರನ್ನು ಆರೋಪಿಯನ್ನಾಗಿ ಮಾಡಿರುತ್ತೇನೆ. ಸುಳ್ಳು ಕೇಸ್ ದಾಖಲೆ ಮಾಡಿರುತ್ತೇನೆಂದರೆ ಸರಿಯಲ್ಲವೆಂದು ತಮ್ಮ ಸಾಕ್ಷಿವನ್ನು ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ:2**

ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರವರು ಪ್ರಕರಣದ ತನಿಖಾಧಿಕಾರಿಯಾಗಿದ್ದು ಇವರು ದಿನಾಂಕ: 3.3.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ದಿನಾಂಕ: 20.8.98 ರಂದು ಅಬಕಾರಿ ಉಪ ನಿರೀಕ್ಷಕರು, ಶ್ರೀ ಪ್ರಭಾಕರ್ ರವರು ದಾಖಲಿಸಿದ ಮೊಕದ್ದಮೆ ಸಂಖ್ಯೆ: 2/98-99ಕ್ಕೆ ಸಂಬಂಧಿಸಿ ತಕ್ಷೀರಿನ ದಾಖಲೆ ಪತ್ರ ಹಾಗೂ ಸೊತ್ತುಗಳನ್ನು ಮುಂದಿನ ಕ್ರಮದ ಬಗ್ಗೆ ತನಗೆ ಹಸ್ತಾಂತರಿಸಿರುತ್ತಾರೆ. ದಿನಾಂಕ: 24.8.98 ರಂದು ತಕ್ಷೀರಿಗೆ ಸಂಬಂದಿಸಿದ ಮಾದರಿ ಬಾಟಲಿಗಳನ್ನು ಅಬಕಾರಿ ರಕ್ಷಕರಾದ ಶ್ರೀ ಭುಜಂಗರಾವ್‌ರವರ ಮೂಲಕ ಕೋರಿಕೆ ಪತ್ರ ಹಾಗೂ ಮಾದರಿ ಮೊಹರಿನೊಂದಿಗೆ ರಾಸಾಯನಿಕ ತಜ್ಞರಿಗೆ ಕಳುಹಿಸಿರುತ್ತೇನೆ. ದಿನಾಂಕ: 18.9.98 ರಂದು ಸದರಿ ತಕ್ಷೀರಿಗೆ ಸಂಬಂಧಿಸಿ ರಾಸಾಯನಿಕ ತಜ್ಞರ ವರದಿ ಹಾಗೂ ಮಾದರಿ ಬಾಟಲಿಗಳನ್ನು ಶ್ರೀ ಭುಜಂಗರಾವ್‌ರವರು ತನಗೆ ಒಪ್ಪಿಸಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯವನ್ನು ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 20.10.98ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿಗೊಳಿಸಲಾಗಿರುತ್ತದೆ. ಹಾಗೂ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 9.9.98ರ ಪ್ರಕಾರ ಜಪ್ತು ಮಾಡಿದ ವಾಹನವನ್ನು ಸದರಿ ವಾಹನದ ನೋಂದಣಿ ಮಾಲೀಕ ಶ್ರೀ ಮಹೇಂದ್ರರವರಿಗೆ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲಾಗಿರುತ್ತದೆ. ವಾಹನ ಮಾಲೀಕರು ಕುಮ್ಮಕ್ಕಿನಲ್ಲಿ ಸದರಿ ತಕ್ಷೀರು ನಡೆದಿದೆ ಎಂದು ದೃಢಪಟ್ಟ ಕಾರಣ ವಾಹನ ಮಾಲೀಕ ಶ್ರೀ ಸಿ.ಕೆ. ಮಹೇಂದ್ರರವರನ್ನು ದಿನಾಂಕ: 22.9.98 ರಂದು ಬಂಧಿಸಿ, ಜಾಮೀನಿನ ಮೇರೆಗೆ ಬಿಡುಗಡೆಗೊಳಿಸಿದೆ. ಸದರಿ ತಕ್ಷೀರಿನ ತನಿಖೆ ಪೂರ್ಣಗೊಳಿಸಿ ದಿನಾಂಕ: 31.1.2001 ರಂದು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ಬಂಟ್ವಾಳ ನಂ.ಪಿ.ಪಿ.1162/2000ರ ಪ್ರಕಾರ ದೋಷರೋಪಣಾ ಪಟ್ಟಿಯನ್ನು ಸಲ್ಲಿಸಲಾಗಿದೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿಗೆ ಉತ್ತರಿಸುತ್ತಾ, ತಕ್ಷೀರಿಗೆ ಸಂಬಂಧಪಟ್ಟ ಸ್ಥಳಕ್ಕೆ ಭೇಟಿ ನೀಡಿಲ್ಲ. ತಕ್ಷೀರಿಗೆ ಸಂಬಂಧಪಟ್ಟ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ತಾನು ಕಳುಹಿಸಿಲ್ಲ. ತಕ್ಷೀರಿಗೆ ಸಂಬಂಧಪಟ್ಟ ಯಾವುದೇ ಸಾಕ್ಷ್ಯಾಧಾರಕ್ಕೆ ಹೇಳಿಕೆ ಮಾಡಿಲ್ಲ. ತಕ್ಷೀರಿನಲ್ಲಿ ವಾಹನ ಮಾಲೀಕರು ಭಾಗಿಯಾಗಿದ್ದಾರೆ ಎನ್ನುವುದಕ್ಕೆ ತಾನು ಯಾವುದೇ ಸಾಕ್ಷ್ಯಾಧಾರ ಹಾಜರುಪಡಿಸಿಲ್ಲ ಎಂದರೆ ಸರಿಯಲ್ಲ, ಹಾಗೂ ಸರಿಯಾಗಿ ತನಿಖೆ ಮಾಡದೇ ಸುಳ್ಳು ದೋಷಾರೋಪಣಾ ಪಟ್ಟಿ ಸಲ್ಲಿಸಿದೇ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಸದರಿ ಸ್ಯಾಂಪಲ್ ಸೀಸೆಗಳ ಮೇಲೆ ಪ್ರಕರಣಕ್ಕೆ ಸಂಬಂಧಿಸಿ ಅಪರಾಧ ಸಂಖ್ಯೆ ನಮೂದಿಸಲಾಗಿದೆ, ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಪ್ರಾ.ಸಾ.1 ಮತ್ತು ಪ್ರಾ.ಸಾ.2 ಪ್ರಕರಣಕ್ಕೆ ಪೂರಕವಾಗಿ ಸಾಕ್ಷಿ ನೀಡಿರುತ್ತಾರೆ. ಇವರು ನೀಡಿರುವ ಹೇಳಿಕೆಯ ಮೇರೆಗೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 9.8.98 ರಂದು ಪ್ರಕರಣದಲ್ಲಿ ಜಪ್ತು ಪಡಿಸಿರುವ ಟಾಟಾ 709 ಲಾರಿ ಸಂಖ್ಯೆ: ಕೆಎಲ್-13-ಬಿ-3551 ರಲ್ಲಿ ಅಕ್ರಮವಾಗಿ ಮದ್ಯವು ಸಾಗಾಣಿಯಾಗಿರುವುದು ಸಾಬೀತಾಗಿರುವುದು ಅಕ್ರಮ ಸಾಗಾಣಿಕೆ ನಿಜವೆಂದು ಕಂಡುಬರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿರುತ್ತೇನೆ.

ಸದರಿ ಅಕ್ರಮ ಮದ್ಯ ಸಾಗಾಣಿಕೆಯ ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಅಗತ್ಯ ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸುವುದು ವಾಹನ ಮಾಲೀಕರ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ವಾಹನ ಮಾಲೀಕರಿಗೆ ಹಲವಾರು ಬಾರಿ ಈ ಪ್ರಾಧಿಕಾರವು ನೋಟೀಸು ನೀಡಿದರೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಹಾಗೂ ಯಾವುದೇ ಸಾಕ್ಷ್ಯಾಧಾರಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿ ಸದರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಸಾಭೀತುಪಡಿಸಿರುವುದಿಲ್ಲ. ಫಿರ್ಯಾದುದಾರರು ದಿನಾಂಕ: 8.1.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯಲ್ಲಿ ದಿನಾಂಕ: 9.8.98 ರಂದು ಲಾರಿಯ ಕ್ಯಾಬಿನ್‌ನಲ್ಲಿ ದೊರೆತ ದಾಖಲಾತಿಗಳ ಪ್ರಕಾರ ವಾಹನದ ನೋಂದಣಿ ಮೂಲಕ ಶ್ರೀ ಕೆ.ಎಂ. ಮಹೇಂದ್ರರವರು ನೋಂದಣಿ ಮಾಲೀಕರಾಗಿರುತ್ತಾರೆಂದು ತಮ್ಮ ಸಾಕ್ಷಿಯಲ್ಲಿ ನೀಡಿರುತ್ತಾರೆ. ಆದುದರಿಂದ ಈ ಅಕ್ರಮ ಮದ್ಯ ಸಾಗಾಣಿಕೆ ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದು ಈ ಪ್ರಾಧಿಕಾರ ಭಾವಿಸಬಹುದಾಗಿದೆ. ಆದುದರಿಂದ ಈ ಎಲ್ಲಾ ಕಾರಣಗಳಿಂದ ಎರಡನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧ್ಯಕ್ಷಕರು, ದ.ಕ. ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ನೇ ಕಲಂ 43(ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ, ಅಬಕಾರಿ ಉಪ ನಿರೀಕ್ಷಕರು, ನಂ.3 ಇಐಬಿ, ಮಂಗಳೂರು ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 2/98-99 ದಿನಾಂಕ: 9.8.98 ರಲ್ಲಿ ವಶಪಡಿಸಿಕೊಂಡಿರುವ ವಾಹನ ಟಾಟಾ-709 ಲಾರಿ ಸಂಖ್ಯೆ: ಕೆಎಲ್-13-ಬಿ-3551ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ. ಈ ಆದೇಶ ಹೊರಡಿಸಿದ ದಿನಾಂಕ: 2.2.2005 ರಿಂದ ಒಂದು ತಿಂಗಳ ಅವಧಿ ಒಳಗೆ, ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನದ ಮಾಲೀಕರು, ವಾಹನ ಸಂಖ್ಯೆ: ಕೆಎಲ್-13-ಬಿ-3551 ಟಾಟಾ-709ನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸದಿದ್ದಲ್ಲಿ, ಸದ್ರಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುವ ಸಂದರ್ಭದಲ್ಲಿ ಪ್ರಾಧಿಕಾರಕ್ಕೆ ಒಪ್ಪಿಸಲಾಗಿರುವ ಬ್ಯಾಂಕ್ ಭದ್ರತೆ ಮೊತ್ತ ರೂ.65,000/- ವನ್ನು ಸರ್ಕಾರಕ್ಕೆ ಪಡೆಯಲು ಆದೇಶಿಸಿರುತ್ತೇನೆ. ಸದ್ರಿ ಬ್ಯಾಂಕ್ ಭದ್ರತೆಯನ್ನು ಈ ಪ್ರಾಧಿಕಾರಕ್ಕೆ, ವಿಜಯ ಬ್ಯಾಂಕ್ ಶಾಖೆ, ಅಳಪೆ, ಪಡೀಲ್, ಮಂಗಳೂರು ಇವರಿಂದ ಡಿ.ಡಿ. ಸಂಖ್ಯೆ: 074673 ದಿನಾಂಕ: 20.9.2001 ರಂತೆ ರೂ.65,000/- ಮೌಲ್ಯವನ್ನು ನೀಡಲಾಗಿದ್ದು, ಸದ್ರಿ ಮೌಲ್ಯವನ್ನು ಈ ಪ್ರಾಧಿಕಾರದ ಹೆಸರಿನಲ್ಲಿ ದಿನಾಂಕ: 5.1.2002 ರಿಂದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿ ಪುನರ್ ಯೋಜನಾ ಠೇವಣಿ ಪತ್ರದಲ್ಲಿ ಇರಿಸಲಾಗಿದ್ದು, ಇದನ್ನು ನವೀಕರಣದೊಂದಿಗೆ ದಿನಾಂಕ: 1.2.2005 ರವರೆಗೆ ನವೀಕರಿಸಲಾಗಿದ್ದು, ಅಂದಿನವರೆಗೆ ಸದ್ರಿ ಮೊತ್ತದ ಮೇಲೆ ಉದ್ಭವಿಸಲಾಗಿರುವ ಬಡ್ಡಿ ಮೊತ್ತ ಪೂರ್ಣ ಮೌಲ್ಯವನ್ನು ಸರ್ಕಾರಕ್ಕೆ ಪಾವತಿಸಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 02.02.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ-1: - ಶ್ರೀ ಯು. ಪ್ರಭಾರಕರ, ಅಬಕಾರಿ ಉಪ ನಿರೀಕ್ಷಕರು, ಇಐಬಿ, ಮಂಗಳೂರು ವಿಭಾಗ, ಮಂಗಳೂರು.

ಪ್ರಾ.ಸಾ-2: - ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಸದರಿ ಸೊತ್ತುಗಳನ್ನು ವಶಪಡಿಸಿಕೊಂಡ ಬಗ್ಗೆ ಅಬಕಾರಿ ಅಧೀಕ್ಷಕರು, ಮಂಗಳೂರು ಇವರಿಗೆ ಸಲ್ಲಿಸಿದ ವರದಿ.

ನಿಶಾನೆ ಪಿ-1(ಎ) - ಫಿರ್ಯಾದುದಾರರ ಮೇಲಿನ ಸಹಿ.

ನಿಶಾನೆ ಪಿ-2 - ಪ್ರಥಮ ಮಾಹಿತಿ ವರದಿಯ ಪ್ರತಿ.

ನಿಶಾನೆ ಪಿ-3 - ಮಹಜರ್‌ನ ಛಾಯ ಪ್ರತಿ.

ನಿಶಾನೆ ಪಿ-5 - ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ ಮೆಮೋದ ಪ್ರತಿ.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:** ಯಾವುದು -ಇಲ್ಲ-

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:** ಯಾವುದು -ಇಲ್ಲ-

**ಎನ್.ಎಂ. ಹುಸೇನ್**
ಪಿ.ಆರ್. 448 ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 278/ಸಂವಿ/ಸಿ.ಓ.ಪಿ/2003, ದಿನಾಂಕ: 24ನೇ ಫೆಬ್ರವರಿ 2005**

ಬೆಂಗಳೂರು ನಗರ ಶಾಂತವೇರಿ ಗೋಪಾಲಗೌಡ ವೃತ್ತ ಮತ್ತು ಮಹಾ ಲೇಖಪಾಲರ ಕಛೇರಿಯ ಜಂಕ್ಷನ್ ಮಧ್ಯೆ ಇರುವ ದೇವರಾಜ ಅರಸ್ ರಸ್ತೆಯ ಉತ್ತರಭಾಗದಲ್ಲಿ ವಿಧಾನಸೌಧ ಇರುತ್ತದೆ. ಈ ರಸ್ತೆಯ ದಕ್ಷಿಣ ಭಾಗಕ್ಕೆ ಸರ್ಕಾರದ ಪೂರ್ವ ನಿರ್ಣಯದಂತೆ ವಿಕಾಸ ಸೌಧವನ್ನು ನಿರ್ಮಿಸಲು ದೇವರಾಜ ಅರಸ್ ರಸ್ತೆಯಲ್ಲಿ ವಾಹನಗಳ ಸಂಚಾರವನ್ನು ನಿಷೇಧಿಸಿ ತಾತ್ಕಾಲಿಕವಾಗಿ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಅದರಂತೆ ವಿಕಾಸ ಸೌಧ ನಿರ್ಮಾಣವು ಪೂರ್ಣಗೊಂಡಿದ್ದು ಇಲ್ಲಿ ಸರ್ಕಾರದ ಸಚಿವಾಲಯದ ಕಛೇರಿಗಳು ಕಾರ್ಯ ನಿರ್ವಹಿಸುತ್ತಿವೆ. ವಿಧಾನಸೌಧ ಮತ್ತು ವಿಕಾಸ

ಸೌಧ ಮಧ್ಯೆ ಇರುವ ದೇವರಾಜ ಅರಸ್ ರಸ್ತೆಯಲ್ಲಿ ವಾಹನ ಸಂಚಾರವನ್ನು ಸ್ಥಗಿತಗೊಳಿಸಲಾಗಿರುತ್ತೆ. ಈ ಎರಡೂ ಸೌಧಗಳಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಸಚಿವಾಲಯ ಕಛೇರಿಗಳು ಕಾರ್ಯ ನಿರ್ವಹಿಸುತ್ತಿದ್ದು ದೇಶದ ಮತ್ತು ವಿದೇಶಿಯರ ಆಕರ್ಷಕ ಕಟ್ಟಡಗಳಾಗಿರುತ್ತವೆ. ಇತ್ತೀಚಿನ ದಿನಗಳಲ್ಲಿ ದೇಶದ ಪ್ರಮುಖ ಆಡಳಿತ ಕಛೇರಿಗಳ ಮೇಲೆ ದುಷ್ಕರ್ಮಿಗಳ ಹಠಾತ್ ಧಾಳಿಗಳು ದೇಶದ ಆಡಳಿತ ವ್ಯವಸ್ಥೆಯಲ್ಲಿ ಬುಡಮೇಲು ಮಾಡುವಂತಹ ಪ್ರಯತ್ನಗಳು ನಡೆಯುತ್ತಾ ಬಂದಿವೆ. ಇವುಗಳನ್ನು ಗಮನದಲ್ಲಿಟ್ಟುಕೊಂಡು ವಿಧಾನಸೌಧ ಮತ್ತು ವಿಕಾಸ ಸೌಧ ಈ ಎರಡೂ ಕಟ್ಟಡಗಳಿಗೂ ಭದ್ರತೆಯನ್ನು ಒದಗಿಸುವುದು ಅತ್ಯವಶ್ಯಕವಾಗಿರುತ್ತೆ. ವಿಧಾನಸೌಧ ಮತ್ತು ವಿಕಾಸಸೌಧ ಎರಡೂ ಒಂದೇ ಆವರಣದಲ್ಲಿರುವ ಅವಳಿ ಕಟ್ಟಡಗಳಾಗಿದ್ದು, ಇವುಗಳ ಭದ್ರತೆಯ ಸಲುವಾಗಿ ಎರಡೂ ಕಟ್ಟಡಗಳ ಮಧ್ಯೆ ಇರುವ ದೇವರಾಜು ಅರಸು ರಸ್ತೆಯಲ್ಲಿ ಯಾವುದೇ ವಾಹನ ಸಂಚಾರಕ್ಕಾಗಲೀ ಅಥವಾ ಪಾದಚಾರಿಗಳ ಸಂಚರಕ್ಕಾಗಲೀ ಅನುವು ಮಾಡಿಕೊಡುವುದು ಸೂಕ್ತವಾಗಿ ಕಂಡುಬರುವುದಿಲ್ಲ. ಪರ್ಯಾಯವಾಗಿ ವಾಹನ ಚಾಲಕರಿಗೆ ಮತ್ತು ಪಾದಚಾರಿಗಳಿಗೆ ಈ ಎರಡೂ ಸೌಧಗಳ ಸುತ್ತಮುತ್ತಲಿನ ರಸ್ತೆಗಳಲ್ಲಿ ಸುಗಮ ಸಂಚಾರಕ್ಕಾಗಿ ವ್ಯವಸ್ಥೆಯನ್ನು ಈಗಾಗಲೇ ಮಾಡಿಕೊಡಲಾಗಿದೆ. ಈಗಾಗಲೇ ದೇವರಾಜು ಅರಸು ರಸ್ತೆಯಲ್ಲಿ ನಿಷೇಧಿಸಲಾಗಿರುವ ವಾಹನಗಳ ಮತ್ತು ಪಾದಚಾರಿಗಳ ಸಂಚಾರವನ್ನು ವಿಧಾನಸೌಧ ಮತ್ತು ವಿಕಾಸ ಸೌಧಗಳ ಭದ್ರತೆಯ ದೃಷ್ಟಿಯಿಂದ ಖಾಯಂ ಆಗಿ ನಿಷೇಧಿಸುವುದು ಅತ್ಯವಶ್ಯಕವಾಗಿರುತ್ತೆ.

ಆದ್ದರಿಂದ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂಋುಉ ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಸಂಚಾರ ನಿರ್ಬಂಧವನ್ನು ಆದೇಶಗೊಳಿಸಿರುತ್ತೇನೆ.

"ದೇವರಾಜ ಅರಸು ರಸ್ತೆಯಲ್ಲಿ ಶಾಂತವೇರಿ ಗೋಪಾಲಗೌಡ ವೃತ್ತದ ಜಂಕ್ಷನ್‌ನಿಂದ ಮಹಾ ಲೇಖಪಾಲರ ಕಛೇರಿ ಜಂಕ್ಷನ್ ವರೆಗೆ ಎರಡೂ ಕಡೆಯಿಂದಲೂ ಎಲ್ಲಾ ರೀತಿಯ ವಾಹನಗಳ ಹಾಗೂ ಪಾದಚಾರಿಗಳ ಸಂಚಾರವನ್ನು ಖಾಯಂ ಆಗಿ ನಿಷೇಧಿಸಿದೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 24.02.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 24.02.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 449 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ULTRA BUSINESS MACHINES PRIVATE LIMITED**
**(Under Liquidation - being wound-up under "Creditors Voluntary winding-up")**
**Regd. Office: No.11/1 & 11/5, Old Market Road, Visveshwarapuram, Bangalore-560 004**
**NOTICE**

Notice is hereby given for general information that the Members of Ultra Business Machines Private Limited, at an Extraordinary General Meeting of the Company held at 10.00 a.m. on Wednesday, the 16th March, 2005 at the registered office of the Company at No.11/1 & 11/5, Old Market Road, Visveshwarapuram, Bangalore-560 004, have passed the following Special Resolution to wind-up the Company voluntarily.

The Creditors of the Company have also approved this voluntary winding-up at their meeting held at 11.00 a.m. on Wednesday, the 16th March, 2005.

"RESOLVED THAT pursuant to the applicable provisions of the Companies Act, 1956 and subject to such other approvals/consents as may be necessary, consent of the Creditors be and is hereby accorded to wind-up the Company, voluntarily, under "Creditors Voluntary winding-up".

Madurai: for ULTRA BUSINESS MACHINED PVT LTD
16.3.2005 **C.V.S. MANIAN**
LIQUIDATOR.

**ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**
**(ಪರಿಸಮಾಪ್ತಿಯಲ್ಲಿದೆ - ಲೇಣೆದಾರರ ಸ್ವಯಂ ಪ್ರೇರಿತ ಸಮಾಪ್ತಿಯ ಅನ್ವಯ ಸಮಾಪ್ತಿಗೊಳಿಸಿದೆ)**
**ನೋಂದಾಯಿತ ಕಛೇರಿ:ನಂ.11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು-560 004**
**ನೋಟೀಸ್**

ಸಾಮಾನ್ಯ ತಿಳುವಳಿಕೆಗಾಗಿ ಈ ಮೂಲಕ ಸೂಚಿಸುವುದೇನೆಂದರೆ, ನಂ.11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು-560 004 ಇಲ್ಲಿರುವ ಕಂಪನಿಯ ನೋಂದಾಯಿತ ಕಛೇರಿಯಲ್ಲಿ 16ನೇ ಮಾರ್ಚ್ 2005ರ ಬುಧವಾರ ಬೆಳಿಗ್ಗೆ 10.00 ಗಂಟೆಗೆ ನಡೆದ ಕಂಪನಿಯ ವಿಶೇಷ ಮಹಾಸಭೆಯಲ್ಲಿ ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್‌ನ ಸದಸ್ಯರುಗಳು ಕಂಪನಿಯನ್ನು ಸ್ವಯಂ ಪ್ರೇರಣೆಯಿಂದ ಮುಚ್ಚಲು ಕೆಳಕಂಡ ವಿಶೇಷ ನಿರ್ಣಯಗಳನ್ನು ಅಂಗೀಕರಿಸಿದ್ದಾರೆ.

ದಿನಾಂಕ: 16ನೇ ಮಾರ್ಚ್ 2005ರ ಬುಧವಾರ ಬೆಳಿಗ್ಗೆ 11.00 ಗಂಟೆಗೆ ನಡೆದ ಸಭೆಯಲ್ಲಿ ಕಂಪನಿಯ ಲೇಣೆದಾರರು ಸಹ ಸ್ವಯಂ ಪ್ರೇರಣೆಯ ಪರಿಸಮಾಪ್ತಿಯನ್ನು ಅನುಮೋದಿಸಿರುವರು.

"ನಿರ್ಣಯ ಕೈಗೊಂಡಿರುವುದೇನೆಂದರೆ, 1956ರ ಕಂಪನಿಗಳ ಅಧಿನಿಯಮದ ಅನ್ವಯವಾಗುವ ಉಪಬಂಧಗಳ ಅನ್ವಯ ಮತ್ತು ಅಗತ್ಯವಾದ ಇಂತಹ ಇತರೆ ಅಂಗೀಕಾರಗಳು ಒಪ್ಪಿಗೆಗಳಿಗೆ ಒಳಪಟ್ಟು ಲೇಣೆದಾರರ ಸ್ವಯಂ ಪ್ರೇರಿತ ಸಮಾಪ್ತಿಯ" ಅನ್ವಯ ಕಂಪನಿಯನ್ನು ಸ್ವಯಂ ಪ್ರೇರಣೆಯಿಂದ ಸಮಾಪ್ತಿಗೊಳಿಸಲು ಲೇಣೆದಾರರು ಈ ಮೂಲಕ ಒಪ್ಪಿಗೆ ನೀಡಿದ್ದಾರೆ.

ಮದುರೈ **ಸಿ.ವಿ.ಎಸ್. ಮಣಿಯನ್**
16.3.2005 ಲಿಕ್ವಿಡೇಟರ್.

**ULTRA BUSINESS MACHINES PRIVATE LIMITED**
**11/1 & 11/5, Old Market Road, Visveshwarapuram, Bangalore-560 004**
**NOTICE**
**FORM NO.151**
**(See Rule 315)**
**Creditor's Voluntary Winding-up**
**Notice of appointment of Liquidator pursuant to section 516**

| Name of Company | ULTRA BUSINESS MACHINES PVT LTD |
|---|---|
| Nature of Business | Manufacture of Automatic data processing machines |
| Address of Registered Office | Ultra Business Machines Pvt Ltd,<br>11/1 & 11/5, Old Market Road, Visveshwarapuram, Bangalore-560 004. |
| Name (s) and adress (es) of Liquidator(s) | Mr. C.V. Manian,<br>Chartered Accountant 11, Goods Shed Street, Madurai-625 001 |
| Date of appointment | 16th March, 2005 |
| By whom appointed | Members/Creditors of the Company at the Extraordinary General Meeting held on 16th March, 2005. |

Madurai:
16.3.2005

for ULTRA BUSINESS MACHINED PVT LTD
**C.V.S. MANIAN**
LIQUIDATOR.

**ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈವೇಟ್ ಲಿಮಿಟೆಡ್**
**ನಂ.11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು-560 004**
**ನೋಟೀಸ್**
**ಫಾರಂ ನಂ.151**
**(ನಿಯಮ 315 ನೋಡಿ)**
**ಲೇಣೆದಾರರ ಸ್ವಯಂ ಪ್ರೇರಿತ ಸಮಾಪ್ತಿ.**
**ಪ್ರಕರಣ 516ರ ಅನ್ವಯ ಲಿಕ್ವಿಡೇಟರ್ ನೇಮಕಾತಿಯ ಬಗ್ಗೆ ಸೂಚನೆ.**

| ಕಂಪನಿ ಹೆಸರು | ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈ. ಲಿ. |
|---|---|
| ವ್ಯವಹಾರದ ಸ್ವರೂಪ | ಆಟೊಮ್ಯಾಟಿಕ್ ಡೇಟಾ ಪ್ರೋಸೆಸಿಂಗ್ ಯಂತ್ರಗಳ ತಯಾರಿಕೆ. |
| ನೋಂದಾಯಿತ ಕಛೇರಿ ವಿಳಾಸ | ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈ. ಲಿ.,<br>ನಂ.11/1 ಮತ್ತು 11/5, ಹಳೆ ಮಾರ್ಕೆಟ್ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು-560 004. |
| ಲಿಕ್ವಿಡೇಟರ್ ಹೆಸರು (ಗಳು) ಮತ್ತು ವಿಳಾಸ (ಗಳು) | ಶ್ರೀ ಸಿ.ವಿ.ಎಸ್. ಮಣಿಯನ್,<br>ಚಾರ್ಟರ್ಡ್ ಅಕೌಂಟೆಂಡ್, 11, ಗೂಡ್ಸ್‌ಶೆಡ್ ಸ್ಟ್ರೀಟ್, ಮಧುರೈ-625 001. |
| ನೇಮಕಾತಿ ದಿನಾಂಕ | 16ನೇ ಮಾರ್ಚ್, 2005 |
| ನೇಮಕ ಮಾಡಿದವರು | ದಿನಾಂಕ: 16ನೇ ಮಾರ್ಚ್, 2005 ರಂದು ನಡೆದ ವಿಶೇಷ ಮಹಾಸಭೆಯಲ್ಲಿ ಕಂಪನಿಯ ಸದಸ್ಯರು/ ಲೇಣೆದಾರರು ಈ ನೇಮಕ ಮಾಡಿರುವರು. |

ಮದುರೈ
16.3.2005
ಪಿ.ಡಿ. 17

ಅಲ್ಟ್ರಾ ಬಿಸಿನೆಸ್ ಮೆಷಿನ್ಸ್ ಪ್ರೈ. ಲಿ. ಪರವಾಗಿ,
**ಸಿ.ವಿ.ಎಸ್. ಮಣಿಯನ್**
ಲಿಕ್ವಿಡೇಟರ್.

**ಸಹಕಾರ ಇಲಾಖೆ**
**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಇವರ ನಡವಳಿಕೆಗಳು**
**ಸಂಖ್ಯೆ: ಸನಿವ/ಯಾ.ಸ್ಥಿರೀಕರಣ/2004-05, ದಿನಾಂಕ: 21ನೇ ಫೆಬ್ರವರಿ 2005**

**ವಿಷಯ:** ಶ್ರೀಮತಿ ಎಸ್. ವಸಂತ ಕೋಂ. ಶ್ರೀ ಕೆ. ಮಂಜುನಾಥರಾವ್, ಶಕ್ತಿ ಇಂಡಸ್ಟ್ರಿಸ್, ವೈ.ಟಿ. ರಸ್ತೆ, ಕೋಡಿ ಸರ್ಕಲ್, ತಿಪಟೂರು ಮತ್ತು ಇತರರು, ಸಿ.ಇ.ಪಿ. ನಂ.40/2003-04, ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ:** ಶಾಖಾ ವ್ಯವಸ್ಥಾಪಕರು, ತುಮಕೂರು, ಶಾಖೆ ಇವರ ಪತ್ರ ಕ್ರ.ಸಂ. ಕೆಆರ್‌ಕೆ ಎಸ್‌ಬಿ/733/2004-05, ದಿನಾಂಕ: 26.8.2004.

**ಪ್ರಸ್ತಾವನೆ:**

ಶ್ರೀಮತಿ ಎಸ್. ವಸಂತ, ಕೋಂ. ಶ್ರೀ ಕೆ. ಮಂಜುನಾಥ ರಾವ್, ಪ್ರೊ: ಶಕ್ತಿ ಇಂಡಸ್ಟ್ರೀಸ್, ವೈ.ಟಿ. ರಸ್ತೆ, ಕೋಡಿ ಸರ್ಕಲ್, ತಿಪಟೂರು, ತುಮಕೂರು ಜಿಲ್ಲೆ ಮತ್ತು ಇತರರು, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ತುಮಕೂರು ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ: 11.09.2003 ರಂದು ಅವಾರ್ಡ್ ನಂ. ಆರ್.ಸಿಎಸ್. ಡಿಡಿಎಸ್.ಎ(ಐ.ಎಂ)ಡಿ7/7267/2002-03 ರೀತ್ಯ ಡಿಕ್ರಿ ಪಡೆದಿರುತ್ತಾರೆ. ಡಿಕ್ರಿಯಾದ ನಂತರವು ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ

ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಅಮಲ್ಜಾರಿ ಆದೇಶ ಸಂಖ್ಯೆ: ಸಿ.ಇ.ಪಿ. ನಂ.40/2003-04 ರಂತೆ ಪಡೆದು ಅಮಲ್ಜಾರಿ ಕಡತವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳಡಿಯಲ್ಲಿ ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸುಸ್ತಿದಾರರಿಗೆ ಸೇರಿದ ಕೆಳಕಂಡ ಆದೇಶದಡಿಯಲ್ಲಿ ತಿಳಿಸಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 28.07.2004 ರಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು ಅಂದು ನಡೆದ ಹರಾಜಿನಲ್ಲಿ ಭಾಗವಹಿಸಿದವರ ಪೈಕಿ ಶ್ರೀ ಎಂ.ಸಿ. ಕೃಷ್ಣ ಕುಮಾರ್, ಬಿನ್. ಎ. ಚಂದ್ರಪ್ಪ, ಹೆಂಚಿನ ಡಿಪೋ, ಕೋಡಿ ಸರ್ಕಲ್, ತಿಪಟೂರು, ತುಮಕೂರು ಜಿಲ್ಲೆ, ಇವರು ಅತಿ ಹೆಚ್ಚಿನ ಮೊತ್ತ ರೂ.1,05,000/- ಕ್ಕೆ (ಒಂದು ಲಕ್ಷದ ಐದು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು, ತುಮಕೂರು ಶಾಖೆ ಬಿಡ್‌ನ್ನು ಶ್ರೀ ಎಂ.ಸಿ. ಕೃಷ್ಣ ಕುಮಾರ್, ಬಿನ್. ಎ. ಚಂದ್ರಪ್ಪ ರವರ ಹೆಸರಿಗೆ ನಿಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರನ್ವಯ ನಿಯಮ 38(2) (ಡಿ)ರ ಪ್ರಕಾರ ಕ್ರಮ ಜರುಗಿಸಲಾಗಿದ್ದು ನಿಯಮ 38(6)(ಎ) ಅನ್ವಯ ಕ್ರಮ ತೆಗೆದುಕೊಳ್ಳಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾದಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀಮತಿ ಎಸ್. ವಸಂತ ಮತ್ತು ಶ್ರೀ ಕೆ. ಮಂಜುನಾಥರಾವ್ ಇವರುಗಳಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 28.7.2004ರ ಬಹಿರಂಗ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್ ಮೊತ್ತ ರೂ.1,05,000/-ಕ್ಕೆ (ಒಂದು ಲಕ್ಷದ ಐದು ಸಾವಿರ ರೂಪಾಯಿಗಳು ಮಾತ್ರ)ಕ್ಕೆ ಬಿಡ್ ಮಾಡಿದ್ದ ಶ್ರೀ ಎಂ.ಸಿ. ಕೃಷ್ಣ ಕುಮಾರ್, ಬಿನ್. ಎ. ಚಂದ್ರಪ್ಪ, ಹೆಂಚಿನ ಡಿಪೋ, ಕೋಡಿ ಸರ್ಕಲ್, ತಿಪಟೂರು, ತುಮಕೂರು ಜಿಲ್ಲೆ, ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಖಾತೆ ನಂ.166/ಎ (198) ಎ ಡಿವಿಜನ್, ವೈ.ಟಿ. ರಸ್ತೆ, ಬಾಲಜಿ ಇಂಡಸ್ಟ್ರಿಸ್ ಹಿಂಭಾಗ, ತಿಪಟೂರು, ವಿಸ್ತೀರ್ಣ ಪೂರ್ವ-ಪಶ್ಚಿಮ 24 ಅಡಿಗಳು, ಉತ್ತರ ದಕ್ಷಿಣ 12 ಅಡಿಗಳು ಜಾಗದಲ್ಲಿರತಕ್ಕ ಆರ್.ಸಿ.ಸಿ. ಕಟ್ಟಡ, ಚೆಕ್ಕುಬಂದಿ:

ಪೂರ್ವಕ್ಕೆ : ಶ್ರೀ ಶಿವನಂಜಪ್ಪನವರ ಆಸ್ತಿ
ಪಶ್ಚಿಮಕ್ಕೆ : ಶ್ರೀ ಟಿ.ಎಂ. ಶಿವಶಂಕರ ರವರ ಆಸ್ತಿ
ಉತ್ತರಕ್ಕೆ : ಖರಾಬ್ ಜಮೀನು
ದಕ್ಷಿಣಕ್ಕೆ : ಶ್ರೀ ಎಂ.ಎಸ್. ಕುಮಾರಸ್ವಾಮಿ

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 21.02.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,
ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

ಪಿ.ಆರ್. 450

**DEPARTMENT OF COMMERCIAL TAXES**
**OFFICE OF THE ASSISTANT COMMISSIONER OF COMMERCIAL TAXES,**
**23rd CIRCLE, M.M. TRUST BUILDING, CHAMARAJPET, BANGALORE**
**NOTIFICATION No. ACCT-23:T:439:2004-05, Dated: 2nd March 2003**

In pursuance of the provisions contained in Rule 6 of central sales Taxes, (Karnataka) Rules 1957. It is hereby notified for general information that the following declaration Form-'C' referred to subsection (4) of section 8 of the central sales Tax Act 1956 are declared to be invalid and void as these 'C' Forms obtained by the dealer M.S.A.P.S.Silk sarees, Bangalore are lost. The details are as under.

| Sl.Nos. of declaration forms misused/ lost | Name and address of the dealer whom declaration form is are issued by the Dept. with date of issue. | Registration No. of the dealer under CST Act. | The address of the dealer whom the declaration is/are sent. | Date of issue of Forms by the dealer | Whether lost/ destroyed or stolen | Remarks |
|---|---|---|---|---|---|---|
| 'C' Forms Nos. 2389518 2389519 2389520 | A.P.S.Silk sarees, No.33 1st Floor, Sanjeevappa Lane, Cubbopnet, Bangalore-2 | KST: 02018408 CST: 02068400 | Not applicable | Not applicable | Lost | All the these 'C' Forms issued to the dealer are declared as invalid And void. |

**K.N. RAJU**
Assistant Commissioner of Commercial Taxes,
23rd Circle, Bangalore.

P.R. 451

**ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರ ಇವರ ನಡವಳಿಕೆಗಳು**

**ಕ್ರಮ ಸಂಖ್ಯೆ: ಡಿಆರ್‌ಟಿ:ಡಿಎಲ್‌ಎಸ್:30:2004-05, ದಿನಾಂಕ: 25ನೇ ಜನವರಿ 2005**

**ವಿಷಯ:** ಸ್ಥಗಿತಗೊಂಡಿರುವ ಶ್ರೀ ಆಧಿಶಕ್ತಿ ಮಹಿಳಾ ಪತ್ತಿನ ಸಹಕಾರ ಸಂಘ ನಿ., ತುಮಕೂರು ಈ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32: ಡಿಎಲ್‌ಎಸ್:84:2004-05, ದಿನಾಂಕ: 25.11.2004.

**ಪ್ರಸ್ತಾವನೆ:**

ಉಲ್ಲೇಖಿತ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರದ ವರದಿಯ ಪ್ರಕಾರ ಶ್ರೀ ಆಧಿಶಕ್ತಿ ಮಹಿಳಾ ಪತ್ತಿನ ಸಹಕಾರ ಸಂಘ ನಿ., ತುಮಕೂರು ಈ ಸಂಘದ ಐದು (5) ಜನ ಆಡಳಿತ ಮಂಡಳಿ ನಿರ್ದೇಶಕರು, ತಮ್ಮ ನಿರ್ದೇಶಕ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದ ಪರಿಣಾಮ ಸಂಘದ ಆಡಳಿತ ಮಂಡಳಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತ್ತು. ಈ ಹಿನ್ನೆಲೆಯಲ್ಲಿ ಸಂಘದ ವ್ಯವಹಾರವನ್ನು ನಿರ್ವಹಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಆದೇಶ ಸಂಖ್ಯೆ: ಸನಿತು-32:ಜಿಬಿಎಂ: ವಿಶೇನೇ:134:2002-03, ದಿನಾಂಕ: 25.11.2003 ರನ್ವಯ ವಿಶೇಷಾಧಿಕಾರಿಯನ್ನು ನೇಮಕ ಮಾಡಿದ್ದರು.

ಸಂಘದ ವಿಶೇಷಾಧಿಕಾರಿಗಳ ವರದಿಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸುವಂತೆ ತುಮಕೂರು ಉಪವಿಭಾಗೀಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋರಿರುತ್ತಾರೆ.

ಮೇಲಿನ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಆದಿಶಕ್ತಿ ಮಹಿಳಾ ಪತ್ತಿನ ಸಹಕಾರ ಸಂಘ ನಿ., ತುಮಕೂರು, ಈ ಸಂಘವನ್ನು ಶ್ರೀ ಬಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸದರಿ ಸಂಘವನ್ನು ಸಮಾಪನೆಗೊಳಿಸಿ ಶ್ರೀ ಲಕ್ಷ್ಮಣ್ಣೆ, ದ್ವಿತೀಯ ದರ್ಜೆ ಸಹಾಯಕ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿ ಸಂಘದ ಪ್ರಭಾರ ವಹಿಸಿಕೊಂಡು ಕಾಯಿದೆ ಮತ್ತು ನಿಯಮಾನುಸಾರ ಕರ್ತವ್ಯ ನಿರ್ವಹಿಸಿ 3 ತಿಂಗಳೊಳಗೆ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ: 25.01.2005 ರಂದು ಹೊರಡಿಸಿರುತ್ತೇನೆ.

ಪಿ.ಆರ್. 452 ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ.

**ವಿಶೇಷ ತಹಶೀಲ್ದಾರರ ಕಛೇರಿ, ಬ್ರಹ್ಮಾವರ, ಉಡುಪಿ ಜಿಲ್ಲೆ**

**ಸಂಖ್ಯೆ: ಎನ್‌ಸಿಆರ್:ಸಿಆರ್:55:14:91-92, ದಿನಾಂಕ: 2ನೇ ಫೆಬ್ರವರಿ 2005**

**68(1)ನೇಯ ಪ್ರಕರಣ-ನಿಯಮ 94 ರನ್ವಯ ಘೋಷಣೆ**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾಗಿರುವ ಸಾರ್ವಜನಿಕ ರಸ್ತೆಯ ಭಾಗವು ಯಾವುದೇ ಸರಕಾರದ ಸ್ವತ್ತಾಗಿದೆಯೋ ಅದು ಸಾರ್ವಜನಿಕರ ಬಳಕೆಗಾಗಿ ಅವಶ್ಯಕವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿದೆ.

ಪ್ರಯುಕ್ತ ಈಗ ಮೈಸೂರು ಸರಕಾರದವರು ಮೈಸೂರು ಭೂ ಕಂದಾಯ ಅಧಿನಿಯಮ 68ನೆಯ ಪ್ರಕರಣದ (1)ನೆಯ ಉಪ ಪ್ರಕರಣದಿಂದ ಕೊಡ ಮಾಡಲಾದ ಅಧಿಕಾರಿಗಳನ್ನು ಉಪಯೋಗಿಸುತ್ತ, ಪೂರ್ವೋಕ್ತ ಸಾರ್ವಜನಿಕ ರಸ್ತೆಯ ಭಾಗವು ಸಾರ್ವಜನಿಕ ಉಪಯೋಗಕ್ಕಾಗಿ ಅವಶ್ಯಕತೆ ಇಲ್ಲ ಮತ್ತು ಪೂರ್ವೋಕ್ತ ಸಾರ್ವಜನಿಕ ರಸ್ತೆಯ ಭಾಗದಲ್ಲಿ ಅಥವಾ ಮೇಲೆ ಸಾರ್ವಜನಿಕರಿಗೆ ಅಥವಾ ಎಲ್ಲಾ ವ್ಯಕ್ತಿಗಳಿಗೆ ಇರುವಂಥ ಹಕ್ಕುಗಳು ರದ್ದುಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿರುತ್ತಾರೆ.

2) ಪೂರ್ವೋಕ್ತ ಸಾರ್ವಜನಿಕ ರಸ್ತೆಯ ಭಾಗದಲ್ಲಿ ಅಥವಾ ಮೇಲೆ ಸಾರ್ವಜನಿಕ ಹೆದ್ದಾರಿಯ ಮೇಲೆ ಹಾಯ್ದುಹೋಗುವ ಅಧಿಕಾರವನ್ನಲ್ಲದೆ ಇತರ ಯಾವೊಂದೂ ಹಿತಾಸಕ್ತಿಯನ್ನುಳ್ಳ ಅಥವಾ ಯಾವೊಬ್ಬ ವ್ಯಕ್ತಿಯು ಅಥವಾ ಇಂಥಾ ಪ್ರಸ್ತಾವದಿಂದ ಅನ್ಯಥವಾ ಭಾದಿತವಾದ ಇತರ ಯಾವೊಂದು ಹಿತಾಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯು ಈ ತಿಳುವಳಿಕೆ ಪತ್ರ (ನೋಟೀಸು) ವು ಹೊರಟ ದಿನಾಂಕದಿಂದ ತೊಂಭತ್ತು ದಿನಗಳೊಳಗಾಗಿ ಜಿಲ್ಲೆಯ ಉಪ ಆಯುಕ್ತರಿಗೆ ಆ ಪ್ರಸ್ತಾವದ ಬಗ್ಗೆ ತನಗಿರುವ ಆಕ್ಷೇಪಗಳನ್ನು ಕುರಿತು ಮತ್ತು ತನ್ನ ಹಿತಾಸಕ್ತಿ ಅಥವಾ ಹಕ್ಕಿನ ಸ್ವಭಾವ ಮತ್ತು ಅವುಗಳು ಯಾವ ರೀತಿಯಲ್ಲಿ ಅನ್ಯಥಾ ಭಾದಿತವಾಗಬಹುದು. ಮತ್ತು ಅಂಥಾ ಹಿತಾಸಕ್ತಿ ಅಥವಾ ಹಕ್ಕಿನ ಬಗೆಗಿನ ಪರಿಹಾರದ ಮೊಬಲಗು ಮತ್ತು ವಿವರಗಳನ್ನು ಲೀಖಿಯಲ್ಲಿ ಕೊಡತಕ್ಕದ್ದು ಮತ್ತು ಎಲ್ಲಾ ಆಕ್ಷೇಪಣೆಗಳು ಮತ್ತು ಹಕ್ಕುಗಳು ಉಕ್ತ ಪ್ರಕರಣದಲ್ಲಿ ಉಪಬಂಧಿಸಿದ ಪ್ರಕಾರ ವಾಸ ಆಯುಕ್ತನಿಂದ ಪರ್ಯಾಲೋಚಿಸಲ್ಪಡತಕ್ಕದ್ದು. ರಸ್ತೆ ಇತ್ಯಾದಿ ಭಾಗ ಇರುವ ಗ್ರಾಮ ಅಥವಾ ಗ್ರಾಮ

ಗ್ರಾಮ : ಚಾಂತಾರು, ಸ.ನಂ.: 34:1ಎ1ಎ1ಎ1 ರಲ್ಲಿ

ತಾಲ್ಲೂಕು : ಉಡುಪಿ

ಜಿಲ್ಲೆ : ಉಡುಪಿ

ರಸ್ತೆಯ ಭಾಗ ಅಥವಾ ಭಾಗ ಇತ್ಯಾದಿಗಳ ವಿವರ:- ಬಾಕೂರು-ಹೆಬ್ರಿ ರಸ್ತೆ

ರಸ್ತೆಯ ಭಾಗ ಅಥವಾ ಭಾಗಗಳ ಸರಿಸುಮಾರು ವಿಸ್ತೀರ್ಣ:- 0-36 ಸೆಂಟ್ಸು

ಎಲ್ಲೆಗಳು:- ಉ-ಸರ್ವೆಲೈನ್, ದ:- ಇದೇ ಸರ್ವೆನಂಬ್ರದ ಉಳಿದ ಸ್ಥಳ,

ಪೂ: ಇದೇ ಸ.ನಂಬರ್ ಉಳಿದ ಸ್ಥಳ, ಪ: ಇದೇ ನಂಬರ್ ಉಳಿದ ಸ್ಥಳ

ಪಿ.ಆರ್. 454 ವಿಶೇಷ ತಹಶೀಲ್ದಾರ್, ಬ್ರಹ್ಮಾವರ, ಉಡುಪಿ ಜಿಲ್ಲೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮೆಪ್ರ/ಎಸ್‌ಆರ್-85/2005, ದಿನಾಂಕ: 26ನೇ ಫೆಬ್ರವರಿ 2005**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀ ಚನ್ನಪ್ಪ ಸಿದ್ರಾಮಪ್ಪ ಹಾಗರಗೊಂಡ | | 1) ಶಿವಲಿಂಗಪ್ಪ ಬಿ. ಯರಜರಿ, |
| 2) ಶ್ರೀಮತಿ ಮಹಾದೇವಿ ಕೋಂ ಚನ್ನಪ್ಪ ಹಾಗರಗೊಂಡ | | 2) ಎ.ಪಿ.ಎಂ.ಸಿ. ಯಾರ್ಡ್ ಮುದ್ದೇಬಿಹಾಳ. |
| ವಾಸ: ಮುದ್ದೇಬಿಹಾಳ. | | ದಿ ಮ್ಯಾನೇಜರ್, ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಬಿಜಾಪುರ. |

**ಪ್ರಕಟಣೆ**

ಶ್ರೀ:ಶ್ರೀಮತಿ 1) ಶ್ರೀ ಚನ್ನಪ್ಪ ಸಿದ್ರಾಮಪ್ಪ ಹಾಗರಗೊಂಡ 2) ಶ್ರೀಮತಿ ಮಹಾದೇವಿ ಕೋಂ ಚನ್ನಪ್ಪ ಹಾಗರಗೊಂಡ ಇವರುಗಳಾದ ತಾವು ಮೃತ ಪ್ರಕಾಶ ಚನ್ನಪ್ಪ ಹಾಗರಗೊಂಡ ಇವರ ತಂದೆ-ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪ್ರಕಾಶ ಚನ್ನಪ್ಪ ಹಾಗರಗೊಂಡ ಇವರು ಒಂದನೇ ಪ್ರತಿವಾದಿಗಳಾದ ಶಿವಲಿಂಗಪ್ಪ ಬಿ. ಯರಜರಿ ಇವರ ಟ್ರಕ್ಕ ನಂ. ಕೆಎ-28:ಎ-4386 ರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕರಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 453 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪೂರ.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ಜಿಲ್ಲಾ ನೋಂದಣಾಧಿಕಾರಿಗಳು, ಬಾಗಲಕೋಟೆ ಇವರ ನಡವಳಿಕೆಗಳು**

**ವಿಷಯ:** ಬಾಗಲಕೋಟೆ ಜಿಲ್ಲೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀಮತಿ ಪದ್ಮಾವತಿ S/o:D/o:W/o ವೆಂಕಪ್ಪ ಜಮಾದಾರ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ:ಇಎಸ್‌ಟಿ-1-273/2001-02, ದಿನಾಂಕ: 14.12.2004.
3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:37:2004-05, ದಿನಾಂಕ: 05.01.2005.

**ಪ್ರಸ್ತಾವನೆ:**

ನೋಂಧಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇರೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು ಆರ್‌ಪಿಎಡಿ ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ / ಎಸ್‌ಟಿ | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1) | ಪದ್ಮಾವತಿ ತಂದೆ ವೆಂಕಪ್ಪ ಜಮಾದಾರ | ಎಸ್.ಸಿ. | ಉಪ ನೋಂದಣಿ ಕಾರ್ಯಾಲಯ, ಬೀಳಗಿ, ಜಿ: ಬಾಗಲಕೋಟೆ | ಪರಿಶಿಷ್ಟ ಜಾತಿ ಮಹಿಳಾ ಅಭ್ಯರ್ಥಿ ಮುಖ್ಯ ಪಟ್ಟಿ |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ: 7.01.2005 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 22.01.2005 ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ, ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ:37:2004-05, ದಿನಾಂಕ: 3ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18(3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀಮತಿ ಪದ್ಮಾವತಿ ತಂದೆ ವೆಂಕಪ್ಪ ಜಮಾದಾರ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,

ಪಿ.ಆರ್. 455 ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ಜಿಲ್ಲಾ ನೋಂದಣಾಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ ಇವರ ನಡವಳಿಕೆಗಳು

**ವಿಷಯ:** ಉಡುಪಿ ಜಿಲ್ಲೆಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ ಲಕ್ಷಣ ಭೀಮಣ್ಣ ಕಟ್ಟಿಮನಿ S/o:D/o:W/o ಮುಕ್ತಾಬಾಯಿ ಭೀಮಣ್ಣ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2) ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರ ಅಲಾಟ್‌ಮೆಂಟ್ ಆದೇಶ ಸಂಖ್ಯೆ:ಇಎಸ್‌ಟಿ-1-273/2001-02, ದಿನಾಂಕ: 14.12.2004.
3) ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ:48:2004-05, ದಿನಾಂಕ: 30.12.2005.

**ಪ್ರಸ್ತಾವನೆ:**

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇಲೆ ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3)ರ ಸದರಿ ನೇಮಕಾತಿ ಆದೇಶವನ್ನು ಆರ್‌ಪಿಎಡಿ ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಎಸ್‌ಸಿ / ಎಸ್‌ಟಿ | ಅಭ್ಯರ್ಥಿಯನ್ನು ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1) | ಲಕ್ಷ್ಮಣ ಭೀಮಪ್ಪ ಕಟ್ಟಿಮನಿ ಬಿನ್ ಮುಕ್ತಾಬಾಯಿ ಭೀಮಣ್ಣ ಕಟ್ಟಿಮನಿ, ಮು: ಇಂಗಳಾಗಿ, ಪೋ: ಅಗರಖೇಡ, ತಾ: ಇಂಡಿ, ಜಿ: ಬಿಜಾಪುರ. | ಎಸ್.ಸಿ. | ಉಪ ನೋಂದಣಿ ಕಾರ್ಯಾಲಯ, ಕಾರ್ಕಳ. | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ದಿನಾಂಕ: **4.01.2005** ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಅವರನ್ನು ನೇಮಕ ಮಾಡಿದ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: **19.01.2005** ರಂದು ಮುಕ್ತಾಯವಾಗಿರುತ್ತದೆ. ಉಲ್ಲೇಖ (3)ರ ಈ ಕಛೇರಿಯ ನೇಮಕಾತಿ ಆದೇಶವನ್ನು ಸ್ವೀಕರಿಸಿದ ನಂತರವೂ, ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಕಛೇರಿಗೆ ಸಲ್ಲಿಸಿರುವುದಿಲ್ಲ. ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

### ಆದೇಶ ಸಂಖ್ಯೆ: ಸಿಬ್ಬಂದಿ:48:2004-05, ದಿನಾಂಕ: 25ನೇ ಫೆಬ್ರವರಿ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18(3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ ಲಕ್ಷಣ ಭೀಮಣ್ಣ ಕಟ್ಟಿಮನಿ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ದ್ವಿತೀಯ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ಉಲ್ಲೇಖ (3)ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,

ಪಿ.ಆರ್. 456 ಉಡುಪಿ ಜಿಲ್ಲೆ, ಉಡುಪಿ.

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ,

## ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ ಪೀಣ್ಯ ಶೆಡ್, ಬೆಂಗಳೂರು-560 058

2004-2005ನೇ ಸಾಲಿನ ವಾರ್ಷಿಕ ಸರಕು ಪರಿಶೀಲನೆಯ ಪ್ರಯುಕ್ತ ಬೆಂಗಳೂರಿನಲ್ಲಿರುವ ಸರ್ಕಾರಿ ಲೇಖನ ಸಾಮಗ್ರಿ ಮಳಿಗೆಯಲ್ಲಿ ದಿನಾಂಕ: 1.4.2005 ರಿಂದ 25.4.2005ರ ವರೆಗೆ ಎಲ್ಲಾ ಸರ್ಕಾರಿ ಕಛೇರಿಗಳಿಗೆ ಲೇಖನ ಸಾಮಗ್ರಿಗಳ ಮತ್ತು ಕಾಗದದ ನೀಡಿಕೆಯನ್ನು ನಿಲ್ಲಿಸಲಾಗುತ್ತಿದೆ ಎಂಬ ವಿಷಯವನ್ನು ಸಂಬಂಧಿಸಿದ ಎಲ್ಲಾ ಸರ್ಕಾರಿ ಕಛೇರಿ ಹಾಗೂ ಅರೆ ಸರ್ಕಾರಿ ಕಛೇರಿಗಳಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

**ಹೆಚ್. ಗಂಗಯ್ಯ**

ನಿರ್ದೇಶಕರು.

**OFFICE OF THE DIRECTOR OF PRINTING STATIONERY AND PUBLICATIONS GOVERNMENT STATIONERY DEPOT BANGALORE**

**NOTIFICATION**

It is hereby notified for the information of all the Government and semi Government Offices that there will be no issue of stationery articles and Papers from the Government Stationery Depot Bangalore from 1.4.2005 to 25.4.2005 (Both days inclusive) on account of Annual Stock Verification for the year 2004-2005.

**H. GANGAIAH**

P.R. 457 Director.

**IN THE COURT OF THE J.M.F.C. II COURT BELGAUM AT: BELGAUM**

**NOTICE DATED: 25th February 2005**

It is hereby notified for information of the public that the under mentioned property is pending as un-claimed. Now it is to be disposed off according to law.

Therefore, it is hereby proclaimed that any one who has got a claim for the below mentioned property may appear before this court with in one month from the date of publication and to prefer his or her claim, failing which the property will be confiscated and no claims there after will be entertained.

**LIST OF UNCLAIMED PROPERTY**

| Sl.No. | P.R.No. | C.C.No. | Description of the property |
|---|---|---|---|
| 1. | 6/01 | 453/00 | Red colour Hero Honda CD-100 Motor cycle, CRL 9295, Engine No.15736. |
| 2 | 60/03 | 773/02 | Bajaj Super Scooter Green colour KA-22/J-1552. |
| 3 | 87/02 | 1025/02 | Motor cycle No. KA-22/H-2410 Black colour, Chassis No.96919, F-02652, Engine No.9617P02620. |
| 4 | 142/03 | Summary Case No.115/00 | Black colour, Yama motor cycle No.CRL-6255, Engine No.ILI 251152. |
| 5 | 165/03 | Summary Case No.51/01 | Yama Motor cycle, Engine No. & Chassis No. ILI-071697 (Full damaged) |

**SMT. UMA S. MATHAD**

P.R. 458 J.M.F.C. II COURT, BELGAUM.

**ಸಹಕಾರ ಇಲಾಖೆ**

**ಅಧಿಸೂಚನೆ ಸಂಖ್ಯೆ: ಸಇ 5 ಎಸಸೇ 2005, ದಿನಾಂಕ: 25ನೇ ಫೆಬ್ರವರಿ 2005**

ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ.) ನಿಯಮಗಳು 1978ರ ನಿಯಮ 2(1) (ಬಿ) ರೊಂದಿಗೆ ಓದಿಕೊಂಡ ಕರ್ನಾಟಕ ನಾಗರೀಕ ಸೇವಾ ನಿಯಮಗಳ, ನಿಯಮ 60 ರಡಿಯ ಟಿಪ್ಪಣಿಯಂತೆ ಶ್ರೀಮತಿ ಬಿ.ಪಿ. ಸವೀತಾ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ರವರಿಗೆ ದಿನಾಂಕ: 14.02.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ.9580-14200ರ ವೇತನ ಶ್ರೇಣಿಯ ಸಮೂಹ-ಎ ಹಿರಿಯ ಶ್ರೇಣಿಯ ಸಹಕಾರ ಸಂಘಗಳ ಉಪ ನಿಬಂಧಕರಾಗಿ ಸ್ಥಾನಪನ್ನ ಮುಂಬಡ್ತಿ ನೀಡಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೆಚ್ಚುವರಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ಸ್ಥಳನಿಯುಕ್ತಿ ನೀಡಿ ನೇಮಿಸುವ ಸಲುವಾಗಿ ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆ (ಅಲ್ಪಸಂಖ್ಯಾತರ ಕಲ್ಯಾಣ) ಇಲಾಖೆಯ ವಶಕ್ಕೆ ನೀಡಲಾಗಿದೆ.

ಕರ್ನಾಟಕ ನಾಗರೀಕ ಸೇವಾ (ಆರ್.ಪಿ.ಪಿ.ಪಿ.) ನಿಯಮಗಳು 1978ರ ನಿಯಮ 2(1)(ಬಿ)ರ ಪ್ರಕಾರ ಶ್ರೀ ಎಂ. ವೆಂಕಟೇಶಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ರವರಿಗೆ ದಿನಾಂಕ: 14.02.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ.9580-14200ರ ವೇತನ ಶ್ರೇಣಿಯ ಸಮೂಹ-ಎ ಹಿರಿಯ ಶ್ರೇಣಿಯ ಸಹಕಾರ ಸಂಘಗಳ ಉಪ ನಿಬಂಧಕರಾಗಿ ಸ್ಥಾನಪನ್ನ ಮುಂಬಡ್ತಿ ನೀಡಿ ಈ ಕೂಡಲೇ ಜಾರಿಗೆ ಬರುವಂತೆ ವರ್ಗಾಯಿಸಿ ಮುಂದಿನ ಆದೇಶದವರೆಗೆ ಕಾರ್ಯದರ್ಶಿ, ಶ್ರೀ ಶ್ರೀರಾಮ ಸಹಕಾರ ಸಕ್ಕರೆ ಕಾರ್ಖಾನೆ (ನಿ), ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು ಇಲ್ಲಿನ ಖಾಲಿ ಹುದ್ದೆಗೆ ಸ್ಥಳನಿಯುಕ್ತಿ ನೀಡಿ ನೀಡಲಾಗಿದೆ.

ಶ್ರೀಮತಿ ಬಿ.ಪಿ. ಸವಿತಾ, ಸಹಕಾರ ಸಂಘಗಳ ಉಪ ನಿಬಂಧಕರು ಮತ್ತು ಶ್ರೀ ಎಂ. ವೆಂಕಟೇಶಪ್ಪ ರವರು ಮುಂಬಡ್ತಿ ಜಾರಿಯಾದ ದಿನಾಂಕ: 14/02/2002 ರಿಂದ ಕಾಲ್ಪನಿಕ ವೇತನ ನಿಗದಿಗೆ (Notional pay fixation) ಮಾತ್ರ ಅರ್ಹರಿದ್ದು ಯಾವುದೇ ವೇತನ ಬಾಕಿಗೆ ಅರ್ಹರಿರುವುದಿಲ್ಲ. ಸಹಕಾರ ಸಂಘಗಳ ಉಪ ನಿಬಂಧಕರ ಹುದ್ದೆಯಲ್ಲಿ ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಮಾತ್ರ ಸಹಕಾರ ಸಂಘಗಳ ಉಪ ನಿಬಂಧಕರ ವೃಂದದಲ್ಲಿ ವೇತನ ಬಾಕಿಗೆ ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರಪುರಕರ್ ವೆಂಕಟೇಶ್**

ಪಿ.ಆರ್. 459 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**DEPARTMENT OF CO-OPERATION**
**OFFICE OF THE ASSISTANT REGISTRAR OF CO-OPERATIVE SOCIETIES,**
**I CIRCLE, MALLESWARAM, BANGALORE-560 003.**
**NO. ARB 44/SC/CON 5/2004-05, Dated: 23rd February 2005**

**Sub:** Confirmation for sale in CEP. No.1646/2004-2005. Decree No.DRB/1/DIS/1208/2001-2002, Dated: 18.09.2002, relates to The Nehrunagar Co-Operative Bank Ltd.,

**Ref:** Letter No. SO/SC/1646/2004-05 Form Sale Officer, attached to Asst. Registrar of Co-Op. Societies 1st Circle, Malleswaram, Bangalore-03.

**PREAMBLE:**

The Sale Officer, Asst. Registrar of Co-Op., Societies Ist Circle, Malleswaram, Bangalore-03, has conducted the sale in DRB/1/DIS/1208/2001-02 and Decree No.1646/2004-05, dated: 17.07.2002 at Coconut Street, Malleswaram Bangalore-03, and sold the under mentioned Immovable Property of Sri G. Sundar Raj, due to the loan outstanding to The Nehrunagar Co-Operative Bank Ltd., Seshadripuram, Bangalore-560 020 and the said Immovable Property knocked down in public auction fixed on 28.12.2004 at Coconut Street, Malleswaram Bangalore in favour of Smt. K. Anuradha, No.4222, 19 'A' Main Road, Subramanya Nagar, Bangalore-560 021, for Rs.9,30,000/- (Rupees Nine Lakh Thirty thousand only) as there are no other highest bidder as per the report of the sale officer. Office of the Asst. Registrar of Co-Op., Societies Ist Circle, Malleswaram, Bangalore-03. Hence the following Orders.

**PROPERTY SCHEDULE**

| Town | Site No. | Extent | Assessment | Kind of Land |
|---|---|---|---|---|
| Cocont Street, Malleswaram, Bangalore-03. | No.104, 8th Cross, Coconut Street, Malleswaram, Bangalore-03. | East to West-21 Ft. North to South 21.06 Ft. Constructed House | 4,72,500/- | Constructed House 472.5 Sq. Ft. |

**ORDER**

The said Immovable Property of 1. Sri G. Sundar Raj, No.104, 8th Cross, Coconut Street, Malleswaram, Bangalore-03. which is mortgaged to The Nahrunagar Co-Operative Bank Ltd., Seshadripuram, Bangalore-560 003, for having taken loan from the said Bank and default in payment, the property have been sold at Public Auction on 28/12/2004 in DRB/1/DIS/1208/01-02, CEP No.1646/2004-05 and knocked down in favour of Smt. K. Anuradha, No.4222, 19th 'A' Main Road, Subramanya Nagara, Bangalore-560 021, for Rs.9,30,000/- (Rupees Nine Lakh Thirty Thousand only).

Hence the Sale conducted on 28/12/2004 is confirmed in favour of Smt. K. Anuradha, No.4222, 19th 'A' Main Road, Subramanya Nagara, Bangalore-560 021, who is the higest bidder as per rule 38 of KCS Rules 1960.

Given under my hand as on this day of 23rd February 2005.

**H.C. JOSHI**

P.R. 460

Asststant Registrar of Co-operative Societies, I Circle, Malleswaram, Bangalore-560 003.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ಪ್ರಕರಣ ಸಂಖ್ಯೆ: ಎಸ್‌ಡಿಕೆ/32/ಡಿಟಿಸಿಆರ್/2001-02, ದಿನಾಂಕ: 26ನೇ ಫೆಬ್ರವರಿ 2005**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** **ವಿರುದ್ಧ** **ಆರೋಪಿಗಳು:**

ಅಬಕಾರಿ ನಿರೀಕ್ಷಕರು,
ಬಂಟ್ವಾಳ ಉಪವಿಭಾಗ,
ಬಂಟ್ವಾಳ

ಪರಾರಿಯಾಗಿರುತ್ತಾರೆ
**ವಾಹನ ಮಾಲೀಕರು:**
ಶ್ರೀಮತಿ ತಾರಾಶ್ರೀ ಶ್ರೀಧರ ಶೆಟ್ಟಿ, ಕೋಂ. ಶ್ರೀಧರ ಶೆಟ್ಟಿ,
**ವಾಸ:** ಶ್ರೀ ಕೃಷ್ಣ ನಿಲಯ, ಮನೆ ನಂಬ್ರ: 5-110, ಕರೋಪಾಡಿ ಗ್ರಾಮ,
ಕನ್ಯಾನ ಪೋಸ್ಟ್, ಬಂಟ್ವಾಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 24.7.2001 ರಂದು ಫಿರ್ಯಾದುದಾರರು ತಮ್ಮ ಸಿಬ್ಬಂದಿ ಸಮೇತ ಬಂಟ್ವಾಳ ತಾಲ್ಲೂಕು ಕರೋಪಾಡಿ ಗ್ರಾಮದ ವಿಜಯಡ್ಕದಿಂದ ಗುವೆದ ಪಡ್ಪು ಕಡೆ ಎಂಬಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಒಂದು ಬಿಳಿ ಬಣ್ಣದ ಟಾಟಾ ಸುಮೊ ಕಾರು ಸಂಖ್ಯೆ: ಕೆಎ-05-ಎನ್-2496ನ್ನು ಓವರ್‌ಟೇಕ್ ಮಾಡಿ ನಿಲ್ಲಿಸಲು ಸೂಚನೆ ನೀಡಿದಾಗ ಟಾಟಾ ಸುಮೊವನ್ನು ಚಲಾಯಿಸುತ್ತಿದ್ದ ವ್ಯಕ್ತಿಯು ವಾಹನವನ್ನು ನಿಲ್ಲಿಸಿ ಕೆಳಗೆ ಜಿಗಿದು ಪಕ್ಕದ ಗುಡ್ಡದ ಕಡೆಗೆ ಓಡಿ ಪರಾರಿಯಾಗಿರುತ್ತಾರೆ. ರಾತ್ರಿ ವೇಳೆಯಾಗಿರುವುದರಿಂದ ವ್ಯಕ್ತಿಯನ್ನು ಹಿಡಿಯಲು ಸಾಧ್ಯವಾಗಿಲ್ಲ. ಸಿಬ್ಬಂದಿಯವರನ್ನೇ ಸಾಕ್ಷಿಯನ್ನಾಗಿ

ಅವರ ಸಮಕ್ಷಮ ಟಾಟಾ ಸುಮೋವನ್ನು ಪರಿಶೀಲಿಸಿದಾಗ ಅವುಗಳಲ್ಲಿ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ಅವುಗಳನ್ನು ಪರಿಶೀಲಿಸಿದಾಗ ಬಾಸ್ ವಿಸ್ಕಿ ಎಂದು ಲೇಬಲ್ ಇರುವ 375 ಎಂ.ಎಲ್.ನ 24 ಸೀಸೆಗಳಂತೆ 16 ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬರುತ್ತದೆ. ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 375 ಎಂ.ಎಲ್.ನ 3 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳಿಗೆ ಬಟ್ಟೆ ದಾರ ಸುತ್ತಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ, ಮಾದರಿ ಸೀಲ್ ತಯಾರಿಸಿ ಮಾದರಿಗಳಿಗೆ ಗುರುತಿನ ಚೀಟಿಗಳನ್ನು ಅಂಟಿಸಿರುತ್ತಾರೆ. ವಾಹನವನ್ನು ಪರಿಶೀಲಿಸಿದಾಗ ಇದರ ನೋಂದಣಿ ಸಂಖ್ಯೆ: ಕೆಎ-05-ಎನ್-2496 ಟಾಟಾ ಸುಮೊವಾಗಿದ್ದು, ಇದರ ಚಾಸೀಸ್ ಸಂಖ್ಯೆ: 385003 ಡಿಟಿಕ್ಯೂ-912919 ಮತ್ತು ಇಂಜಿನ್ ಸಂಖ್ಯೆ: ಡಿಟಿಕ್ಯೂ-742143 ಟಿವೈಪಿಇ 483 ಡಿಎಲ್ 41 ಆಗಿರುತ್ತದೆ. ಸದರಿ ವಾಹನದಲ್ಲಿ ಯಾವುದೇ ಅಧಿಕೃತ ರಹದಾರಿ ಪತ್ರಗಳಿಲ್ಲದೇ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದನ್ನು ಪತ್ತೆ ಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 14,12ರ ಪ್ರಕಾರ ಅಪರಾಧವಾಗಿದ್ದು,ಕಲಂ 32, 38(ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ ಪರಾರಿಯಾಗಿರುವ ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 3/2001-02 ದಿನಾಂಕ: 24.7.2001 ರಂದು ಮೊಕದ್ದಮೆ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿರುತ್ತಾರೆ. ಅಲ್ಲದೆ ಪ್ರಕರಣದ ಮುಂದಿನ ನಡವಳಿಕೆಗಳ ಬಗ್ಗೆ ಎಲ್ಲಾ ಸೊತ್ತುಗಳ ಸಮೇತ ದಾಖಲೆ ಪತ್ರಗಳೊಂದಿಗೆ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರಿಗೆ ಈ ಪ್ರಾಧಿಕಾರದ ಆದೇಶದ ಮೇರೆಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆ ಮುಂದುವರಿಸಿದ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರು ಪ್ರಕರಣಕ್ಕೆ ಸಂಬಂಧಿಸಿದ ಮದ್ಯದ ಮಾದರಿಗಳನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ದಿನಾಂಕ: 28.08.01 ರಾಸಾಯನಿಕ ತಜ್ಞರ ವರದಿ ಸಂಖ್ಯೆ: ಇ-1087-3/8-8-01ನ್ನು ಪಡೆಯಲಾಗಿದ್ದು, ಸದರಿ ರಾಸಾಯನಿಕ ವಿಶ್ಲೇಷಕರ ವರದಿಯಂತೆ ಮದ್ಯದ ಸ್ಯಾಂಪಲ್‌ಗಳಲ್ಲಿ ಭಾರತೀಯ ತಯಾರಿಕಾ ಮದ್ಯ ಪತ್ತೆಯಾಗಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದಾಗಿ ದೃಢಪಟ್ಟಿರುವುದು ಎಂದು ವರದಿ ನೀಡಿರುವ ಮೇರೆಗೆ ಹಾಗೂ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ತನಿಖಾ ವರದಿ ದಿನಾಂಕ: 11.9.2001ರ ವರದಿಯಲ್ಲಿ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಮದ್ಯದ ಸೊತ್ತುಗಳನ್ನು ಯಾರೊಬ್ಬರೂ ಸ್ವಾಧೀನದ ಬಗ್ಗೆ ಮುಂದೆ ಬಾರದಿರುವ ಕಾರಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಒಪ್ಪಿಸಿದ ತನಿಖಾ ವರದಿಯನ್ನು ಪರಿಗಣಿಸಿ, ಈ ಪ್ರಾಧಿಕಾರವು ದಿನಾಂಕ: 15.9.2001ರ ಆದೇಶದಲ್ಲಿ ಸದರಿ ಮದ್ಯದ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶಿಸಿರುತ್ತದೆ.

ಸದರಿ ವಾಹನದ ಆರ್.ಸಿ. ಮಾಲೀಕರಾದ ಶ್ರೀಮತಿ ತಾರಾಶ್ರೀ ಶ್ರೀಧರ ಶೆಟ್ಟಿ, ಕೋಂ ಶ್ರೀಧರ ಶೆಟ್ಟಿ, ವಾಸ: ಶ್ರೀ ಕೃಷ್ಣ ನಿಲಯ, ಮನೆ ನಂಬರ್: 5-110, ಕರೋಪಾಡಿ ಗ್ರಾಮ, ಕನ್ಯಾನ ಪೋಸ್ಟ್, ಬಂಟ್ವಾಳ ಇವರು ತಮ್ಮ ವಕೀಲರ ಮುಖಾಂತರ ದಿನಾಂಕ: 25.7.2001 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನವು ತನ್ನದೆಂದು, ಸದರಿ ವಾಹನದ ಮೇಲೆ ಗ್ರಾಮೀಣ ಸಹಕಾರಿ ಬ್ಯಾಂಕ್ ನಿಯಮಿತ, ಕನ್ಯಾನ ಇಲ್ಲಿಂದ ಸಾಲವನ್ನು ಪಡೆದುಕೊಂಡಿದ್ದು, ತನ್ನ ವಾಹನವನ್ನು ಶ್ರೀ ಅಶ್ವಥ್ ಎಂಬವರಿಗೆ ದಿನಕೂಲಿ ಮೇಲೆ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ: 24.7.2001 ರಂದು ಸದ್ರಿ ವಾಹನವನ್ನು ವಿಟ್ಲ ಪೇಟೆಗೆ ತೆಗೆದುಕೊಂಡು ಹೋಗಲು ತಿಳಿಸಿದ್ದು, ತದನಂತರ ಸದ್ರಿ ವಾಹನವು ಮನೆಗೆ ವಾಪಸ್ಸು ಬಾರದೇ ವಿಚಾರಿಸಿದಾಗ, ಬಂಟ್ವಾಳ ಅಬಕಾರಿ ಇಲಾಖಾ ಅಧಿಕಾರಿಗಳು ಜಪ್ತಿ ಮಾಡಿರುವುದು ಎಂದು ತಿಳಿಯಿತು. ಸದರಿ ವಾಹನವನ್ನು ತನ್ನ ಸ್ವಂತ ಕೆಲಸಕ್ಕೆ ಹಾಗೂ ಕೃಷಿ ಕೆಲಸಗಳ ಉಪಯೋಗಕ್ಕೆ ಇಟ್ಟುಕೊಂಡಿದ್ದು, ಸದರಿ ಚಾಲಕನು ಅಕ್ರಮವಾಗಿ ಮದ್ಯ ಸಾಗಾಟ ಮಾಡಿರುವುದು ತನಗೆ ತಿಳಿದಿರುವುದಿಲ್ಲ. ತನ್ನ ವಾಹನವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ ಸಾರಿಗೆ ಅಧಿಕಾರಿಗಳು ವಾಹನದ ಈಗಿನ ಮೌಲ್ಯ ರೂ.60,000/- ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುವ ಮೇರೆಗೆ ಈ ಪ್ರಾಧಿಕಾರವು ದಿನಾಂಕ: 20.8.2001 ರಂದು ಅರ್ಜಿದಾರರಿಗೆ ಮೊಕದ್ದಮೆಯಲ್ಲಿ ಜಪ್ತು ಮಾಡಿರುವ ಟಾಟಾ ಸುಮೊ ಸಂಖ್ಯೆ: ಕೆಎ-05-ಎನ್-2496ರ ಮೌಲ್ಯ ರೂ.60,000/- ಕ್ಕೆ ಷರತ್ತಿಲ್ಲದ ಬ್ಯಾಂಕ್ ಗ್ಯಾರಂಟಿಯನ್ನೇ ನೀಡಬೇಕೆಂದು ಅರ್ಜಿದಾರರಿಗೆ ನೋಟೀಸು ನೀಡಿರುತ್ತಾರೆ.

ಸದರಿ ನೋಟೀಸಿಗೆ ಉತ್ತರವಾಗಿ ಅರ್ಜಿದಾರನು ಈ ಪ್ರಾಧಿಕಾರಕ್ಕೆ ರೂ.60,000/- ಗಳ ಬ್ಯಾಂಕ್ ಗ್ಯಾರಂಟಿ ನೀಡಿರುವುದರಿಂದ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 25.8.2001 ರಂದು ಸದರಿ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಟಾಟಾ ಸುಮೊ ಸಂಖ್ಯೆ: ಕೆಎ-05-ಎನ್-2496ನ್ನು ಅದರ ಆರ್.ಸಿ. ಮಾಲೀಕರಿಗೆ ತಾತ್ಕಾಲಿಕ ನೆಲೆಯಲ್ಲಿ ಷರತ್ತುಗಳ ಅನ್ವಯ ಬಿಡುಗಡೆಗೊಳಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ, ಸರಕಾರದ ಪರ ಮೂರು ಸಾಕ್ಷಿಗಳನ್ನು ಹಾಗೂ ಪ್ರತಿರಕ್ಷಾ ಪರ ಒಂದು ಸಾಕ್ಷಿಯನ್ನು ವಿಚಾರಣೆ ನಡೆಸಿ ಅವರ ಹೇಳಿಕೆಯನ್ನು ಪಡೆಯಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು, ಪರಿಶೀಲನಾಂಶಗಳು ಈ ಕೆಳಗಿನಂತೆ ಇರುತ್ತದೆ.

1) ದಿನಾಂಕ: 24.7.2001 ರಂದು ವಾಹನ ಟಾಟಾ ಸುಮೊ ಸಂಖ್ಯೆ: ಕೆಎ-05-ಎನ್-2496 ರಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿ ಮಾಡಲಾಗಿತ್ತೆ?

2) ವಶಪಡಿಸಿಕೊಂಡಿರುವ ವಾಹನ ಮಾಲೀಕರು ನಾನೆಂದೂ, ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?

3) ಜಪ್ತು ಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಾಧಾರಗಳ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

1) ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಾ.ಸಾ-1:**

ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ದಿನಾಂಕ: 7.8.2001 ರಂದು ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಹಾಗೂ ಸೊತ್ತುಗಳನ್ನು ಮುಂದಿನ ನಡವಳಿಕೆ ಬಗ್ಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 8.8.01 ರಂದು ಸದರಿ ತಕ್ಷೀರಿನಲ್ಲಿ ಪಡೆದುಕೊಂಡ 3 ಮಾದರಿ ಸೀಸೆಗಳನ್ನು, ಕೋರಿಕೆ ಪತ್ರ ಮತ್ತು ಮಾದರಿಯ ಮೊಹರಿನೊಂದಿಗೆ ಅಬಕಾರಿ ಮುಖ್ಯ ರಕ್ಷಕರಾದ ಶ್ರೀ ಭುಜಂಗ ರಾವ್ ಇವರ ಮೂಲಕ ರಾಸಾಯನಿಕ ವಿಶ್ಲೇಷಕರಿಗೆ ಕಳುಹಿಸಿರುತ್ತೇನೆ, ಮತ್ತು ದಿನಾಂಕ: 29.8.2001 ರಂದು ತನಗೆ ರಾಸಾಯನಿಕ ವಿಶ್ಲೇಷಕರಿಂದ ವರದಿ ಬಂದಿರುತ್ತದೆ. ಈ ಪ್ರಾಧಿಕಾರದ ಆದೇಶದ ಮೇರೆಗೆ ಜಪ್ತಿ ಮಾಡಿದ ಟಾಟಾ ಸುಮೊ ಸಂಖ್ಯೆ: ಕೆಎ-05-ಎನ್-2496ನ್ನು ವಾಹನ ನೋಂದಣಿ ಮಾಲೀಕರಾದ ಶ್ರೀಮತಿ ತಾರಾಶ್ರೀ ಎಂಬವರಿಗೆ ಮುಚ್ಚಳಿಕೆ ಪಡೆದು ಹಸ್ತಾಂತರಿಸಿರುತ್ತೇನೆ. ಹಾಗೂ ದಿನಾಂಕ: 11.9.2001 ರಂದು ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿರುತ್ತೇನೆ. ಈ ಪ್ರಕರಣದ ತನಿಖೆಯು ಪೂರ್ಣಗೊಂಡಿರುವುದಿಲ್ಲ. ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಲು ಬಾಕಿ ಇರುತ್ತದೆ. ಅದರ ಛಾಯಾ ಪ್ರತಿಯನ್ನು ನಿಶಾನೆ ಪಿ-1 ಎಂದು, ಪ್ರಥಮ ಮಾಹಿತಿ ವರದಿಯ ಛಾಯಾ ಪ್ರತಿಯನ್ನು ನಿಶಾನೆ ಪಿ-2 ಎಂದು ಯಾದಾಸ್ತಿನ ಛಾಯಾ ಪ್ರತಿಯನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಪ್ರಕರಣವು ತನಿಖೆ ಹಂತದಲ್ಲಿರುವುದರಿಂದ ವಾಹನ ಮಾಲೀಕರು ತಕ್ಷೀರಿನಲ್ಲಿ ಭಾಗಿಯಾಗಿದ್ದಾರೆಂದು ಹೇಳಲು ಸಾಧ್ಯವಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ-2:**

ಶ್ರೀ ಭುಜಂಗ ರಾವ್, ಅಬಕಾರಿ ಮುಖ್ಯ ರಕ್ಷಕ, ಬಂಟ್ವಾಳ ವಲಯ ಇವರು ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು, ದಿನಾಂಕ: 11.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಅಬಕಾರಿ ನಿರೀಕ್ಷಕರ ನಿರ್ದೇಶನದಂತೆ ಸ್ಯಾಂಪಲ್‌ಗಳನ್ನು, ರಾಸಾಯನಿಕ ತಜ್ಞರಿಗೆ ತಲುಪಿಸಿ ನಂತರ ಪಡೆದಿರುತ್ತೇನೆ ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಾನು ಮಾದರಿ ಸೀಸೆಗಳನ್ನು ಪಡೆದುಕೊಂಡ ಬಗ್ಗೆ ಯಾವುದೇ ಸ್ವೀಕೃತಿಯನ್ನು ಅವರಿಗೆ ಕೊಟ್ಟಿಲ್ಲ ಎಂದು ತಮ್ಮ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ನುಡಿದಿರುತ್ತಾರೆ.

**ಪ್ರಾ.ಸಾ-3:**

ಶ್ರೀ ರವೀಂದ್ರ ಕೋಟೆಕಾರ್, ಅಬಕಾರಿ ನಿರೀಕ್ಷಕರು, ಕುಂದಾಪುರ ವಲಯ ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿನಾಂಕ: 22.9.2004 ರಂದು ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ದಿನಾಂಕ: 24.7.2001 ರಂದು ತಮ್ಮ ಸಿಬ್ಬಂದಿಗಳೊಂದಿಗೆ ವಿಜಯಡ್ಕದಿಂದ ಗುವೆದ ಪಡ್ಪು ಕಡೆಗೆ ಸರ್ಕಾರಿ ಜೀಪಿನಲ್ಲಿ ಗಸ್ತು ತಿರುಗುವಾಗ ವಿಜಯಡ್ಕದಿಂದ ಸುಮಾರು 300 ಮೀ. ದಾಟಿದಾಗ ತಮ್ಮ ಮುಂಭಾಗದಲ್ಲಿ ಒಂದು ಟಾಟಾ ಸುಮೊ ವಾಹನವು ಹೋಗುತ್ತಿದ್ದು, ಅನುಮಾನದ ಮೇರೆಗೆ ಅದನ್ನು ಬೆನ್ನಟ್ಟಿದೆವು. ತಮ್ಮ ಜೀಪ್‌ನಲ್ಲಿ ಹೆಡ್ ಲೈಟ್‌ನ ಸಿಗ್ನಲ್ ಕೊಟ್ಟು ಹಾರ್ನ್ ಮಾಡಿ ನಿಲ್ಲಿಸಲು ಸೂಚನೆ ನೀಡಿದಾಗ, ಅದರ ಚಾಲಕ ವಾಹನದಿಂದ ಕೆಳಗಿಳಿದು ಪರಾರಿಯಾಗಿರುತ್ತಾನೆ. ತಮ್ಮ ಸಿಬ್ಬಂದಿಯವರನ್ನೇ ಸಾಕ್ಷಿಗಳನ್ನಾಗಿ ಬರಮಾಡಿಕೊಂಡು ವಾಹನವನ್ನು ತಪಾಸಣೆ ನಡೆಸಿದಾಗ, ಅದರ ಒಳಗೆ 16 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 375 ಎಂ.ಎಲ್.ನ 24 ಸೀಸೆಗಳಂತೆ ಒಟ್ಟು 144.000 ಲೀಟರ್ ಬಾಸ್ ವಿಸ್ಕಿ ಮದ್ಯ ತುಂಬಿರುವುದು ಕಂಡು ಬಂತು. ಸದರಿ ಬೇರೆ ಯಾರೂ ವಾರಸುದಾರರು ಕಂಡು ಬರದಿದ್ದರಿಂದ ಸ್ಥಳದಲ್ಲಿ ಯಾದಾಸ್ತು ತಯಾರಿಸಿ ವಾಹನ ಹಾಗೂ ಮದ್ಯ ವಶಪಡಿಸಿಕೊಂಡೆನು. ವಾಹನದ ಇಂಜೀನ್ ನಂಬರ್ ಹಾಗೂ ಚಾಸೀಸ್ ನಂಬರನ್ನು ಮಹಜರಿನಲ್ಲಿ ನಮೂದಿಸಿರುತ್ತೇನೆ. ಮದ್ಯ ಹಾಗೂ ವಾಹನವನ್ನು ತನ್ನ ಕಛೇರಿಗೆ ತಂದು ಮಾನ್ಯ ನ್ಯಾಯಾಲಯಕ್ಕೆ ಪ್ರಥಮ ಮಾಹಿತಿ ವರದಿಯನ್ನು ಸಲ್ಲಿಸಿರುತ್ತೇನೆ. ಮುಂದಿನ ತನಿಖೆಗಾಗಿ ಸೊತ್ತುಗಳನ್ನು ಹಾಗೂ ದಾಖಲೆಗಳನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರಿಗೆ ಅನುಮತಿ ಪಡೆದು ಹಸ್ತಾಂತರಿಸಿರುತ್ತೇನೆ. ಯಾದಾಸ್ತು ಜರುಗಿಸಿದ ವೇಳೆಯಲ್ಲಿ ಸದರಿ ಮದ್ಯದ ಪೆಟ್ಟಿಗೆಗಳಿಂದ 375 ಎಂ.ಎಲ್.ನ 3 ಸೀಸೆಗಳನ್ನು ಮಾದರಿಯಾಗಿ ಪ್ರತ್ಯೇಕಿಸಿ, ಅದಕ್ಕೆ ಬಟ್ಟೆ ದಾರ ಸುತ್ತಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಿ ಮಾದರಿ ಸೀಲನ್ನು ತಯಾರಿಸಿರುತ್ತೇನೆ. ಅಧಿಕೃತ ಅಧಿಕಾರಿಯವರಿಗೆ ತಾನು ಸಲ್ಲಿಸಿದ ವರದಿಯನ್ನು ನಿಶಾನೆ ಪಿ-1 ಎಂದು, ಅದರ ಮೇಲಿನ ತನ್ನ ಸಹಿಯನ್ನು ನಿಶಾನೆ ಪಿ-4ಎ ಗುರುತಿಸಲಾಗಿರುತ್ತದೆ ಎಂದು ತಮ್ಮ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಕ್ಷೀರು ಸ್ಥಳದ ಮಹಜರನ್ನು ತಾನು ತಯಾರಿಸಿದ್ದು, ಮಹಜರಿನಲ್ಲಿ ಸ್ಥಳದ ಚೆಕ್ ಬಂದಿಯನ್ನು ನಮೂದಿಸಿಲ್ಲ ಹಾಗೂ ವಾಹನ ನೋಂದಣಿ ಸಂಖ್ಯೆಯನ್ನು ಮಹಜರಿನಲ್ಲಿ ನಮೂದಿಸಿಲ್ಲ. ತಕ್ಷೀರು ಸ್ಥಳಕ್ಕೆ ಎಷ್ಟು ಜನ ಸಿಬ್ಬಂದಿಗಳು ಹೋಗಿದ್ದರು ಎಂಬ ಬಗ್ಗೆ ನಮೂದಿಸಿಲ್ಲ ಎಂದರೆ ಸರಿ. ವಿಜಯಡ್ಕದಿಂದ ಗುವೆದ ಪಡ್ಪುವಿಗೆ ತನ್ನ ಅಭಿಪ್ರಾಯದಲ್ಲಿ 3 ರಿಂದ 4 ಕಿ.ಮೀ. ಅಂತರವಿರುತ್ತದೆ. ವಿಜಯಡ್ಕದಿಂದ 300 ಮೀಟರ್ ದೂರದಲ್ಲಿ ವಾಹನವನ್ನು ನಿಲ್ಲಿಸಿ ತಪಾಸಣೆ ಮಾಡಿರುತ್ತೇನೆ. ವಿಜಯಡ್ಕ ಪೇಟೆಯಲ್ಲಿ 25 ಅಂಗಡಿಗಳು ಇರುತ್ತದೆ ಎಂದರೆ ಸರಿಯಲ್ಲ. ತನ್ನ ಅಭಿಪ್ರಾಯದಲ್ಲಿ 8 ರಿಂದ 10 ಅಂಗಡಿಗಳು ಇರುತ್ತದೆ. ವಿಜಯಡ್ಕದಲ್ಲಿ ಬಾಡಿಗೆಗಾಗಿ ಸಾಕಷ್ಟು ವಾಹನಗಳು ನಿಂತಿರುತ್ತದೆ ಎಂದರೆ ಸರಿಯಲ್ಲ. ತಕ್ಷೀರು ಸ್ಥಳದಿಂದ ಕುರುಪೋಲತಡ್ಕವು ಒಂದೂವರೆ ಕಿ.ಮೀ. ದೂರದಲ್ಲಿದೆ. ಅದು ಜನನಿಬಿಡ ಪ್ರದೇಶ. ತಕ್ಷೀರು ಸ್ಥಳದಿಂದ ಕುರುಪೋಲತಡ್ಕಕ್ಕೆ ಹೋಗಬೇಕಾದರೆ ವಿಜಯಡ್ಕವನ್ನು ದಾಟಿ ಹೋಗಬೇಕು. ತಕ್ಷೀರು ಸ್ಥಳವು ಅಂಕು ಡೊಂಕು ಮಾರ್ಗವಾಗಿರುವುದರಿಂದ ಆರೋಪಿಯು ವಾಹನವನ್ನು ಅತೀ ವೇಗದಲ್ಲಿ ಚಲಾಯಿಸಲು ಸಾಧ್ಯವಾಗಲಿಲ್ಲ. ವಾಹನವನ್ನು ತಮ್ಮ ವಾಹನದಿಂದ ಹಿಂದೆ ಹಾಕಿ ನಿಲ್ಲಿಸಿದೆವು. ವಾಹನವನ್ನು ತಪಾಸಣೆ ಮಾಡುವ ಮೊದಲು ಕರ್ನಾಟಕ ಅಬಕಾರಿ ಕಾಯಿದೆ ಕಲಂ 54 ರಡಿಯಲ್ಲಿ ಒಂದು ಸರ್ಚ್ ಮೆಮೋವನ್ನು ತಯಾರಿಸಿದ ಬಗ್ಗೆ ಈಗ ನನಗೆ ನೆನಪಿಲ್ಲ. ಈ ಪ್ರಕರಣದಲ್ಲಿ ವಾರಂಟ್ ಪಡೆದುಕೊಂಡಿರುವುದಿಲ್ಲ ಮತ್ತು ವಾರಂಟ್ ಪಡೆದುಕೊಳ್ಳದೇ ಇದ್ದುದಕ್ಕೆ ಕಾರಣಗಳನ್ನು ನಮೂದಿಸಿ ಯಾವುದೇ ಮೆಮೋವನ್ನು ತಯಾರಿಸಿಲ್ಲ. ತಕ್ಷೀರು ಸ್ಥಳದಲ್ಲಿ ಮಹಜರು ತಯಾರಿಸುವ ಸಮಯದಲ್ಲಿ ಸ್ವತಂತ್ರ ಸಾಕ್ಷಿದಾರರನ್ನು ಪಡೆದುಕೊಳ್ಳಲು ನನಗೆ ಸಾಧ್ಯವಾಗಲಿಲ್ಲ. ತನ್ನ ಚಾಲಕ ದೇವೆಂದ್ರನಾಗಿದ್ದು, ಅವನ ಸಹಿಯನ್ನು ಮಹಜರಿನಲ್ಲಿ ಪಡೆಯಲು ಸಾಧ್ಯವಾಗಲಿಲ್ಲ. ವಶಪಡಿಸಿಕೊಂಡ ಪೆಟ್ಟಿಗೆಗಳ ಮೇಲೆ ಕ್ರ.ಸಂ. ಮತ್ತು ಮೊಕದ್ದಮೆ ಸಂಖ್ಯೆಯನ್ನು ನಮೂದಿಸಿಲ್ಲ. ಆದರೆ ತೆಗೆದ ಮಾದರಿ ಸೀಸೆಗಳ ಮೇಲೆ ನಮೂದಿಸಿರುತ್ತೇನೆ. ಮಾದರಿ ಸೀಸೆಗಳು ಈ ಪ್ರಾಧಿಕಾರದ ಮುಂದೆ ಇರುವುದಿಲ್ಲ. ಮಾದರಿ ಸೀಸೆಗಳನ್ನು ಯಾವ ಪೆಟ್ಟಿಗೆಗಳಲ್ಲಿ ನಿರ್ದಿಷ್ಟವಾಗಿ ಯಾವ ಪೆಟ್ಟಿಗೆಯಿಂದ ತೆಗೆದಿರುತ್ತೇನೆ ಎಂದು ಹೇಳಲು ಸಾಧ್ಯವಿಲ್ಲ. ಸದರಿ ದಿನಾಂಕ: 24.7.2001 ರಂದು ಯಾವುದೇ ರೈಡಿಗೆ ಹೋಗಿಲ್ಲ ಮತ್ತು ವಾಹನದಲ್ಲಿ ಯಾವುದೇ ಮದ್ಯ ವಶಪಡಿಸಿಕೊಂಡಿಲ್ಲ ಎಂದರೆ ಸರಿಯಲ್ಲ. ಈ ಪ್ರಾಧಿಕಾರದ ಮುಂದೆ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ. ಬೇರೆ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯದ ಪೆಟ್ಟಿಗೆಗಳಿಂದ ಮಾದರಿ ಸೀಸೆಯನ್ನು ತಯಾರಿಸಿ ಈ ಪ್ರಕರಣಕ್ಕೆ ಅಳವಡಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ನುಡಿದಿರುತ್ತಾರೆ.

ಈ ಮೇಲಿನ ಸಾಕ್ಷಿ ವಿಚಾರಣೆಗಳಿಂದ ಮೊದಲನೆಯ ಪರಿಶೀಲನಾ ಅಂಶಕ್ಕೆ ಗುಣಾತ್ಮಕವಾಗಿ ಪರಿಗಣಿಸಿರುತ್ತೇನೆ.

**ಡಿಡಬ್ಲ್ಯೂ-1:**

ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ವಾಹನ ಮಾಲೀಕರಾದ ಶ್ರೀಮತಿ ತಾರಾಶ್ರೀ ಶ್ರೀಧರ್ ಶೆಟ್ಟಿ ಇವರು ದಿನಾಂಕ: 3.11.2004 ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನುಡಿದಿರುತ್ತಾರೆ. ತಾನು ಪ್ರಕರಣಕ್ಕೆ ಸಂಬಂಧಿಸಿದ ಟಾಟಾ ಸುಮೊ ಕಾರು ಸಂಖ್ಯೆ: ಕೆಎ-05-ಎನ್-2496ರ ನೋಂದಾಯಿತ ಮಾಲೀಕರಾಗಿರುತ್ತೇನೆ. ತಾನು ಈ ವಾಹನವನ್ನು ದಿನಾಂಕ: 7.8.2000 ರಂದು ಖರೀದಿಸಿರುತ್ತೇನೆ. ಈ ವಾಹನವನ್ನು ಖರೀದಿಸಲು ತಾನು ವಿಟ್ಲ ಗ್ರಾಮೀಣ ಬ್ಯಾಂಕಿನಿಂದ ಸಾಲ ಪಡೆದಿರುತ್ತೇನೆ. ತಾನು ಕೃಷಿಕಳು. ತನಗೆ 15 ಎಕರೆ ಕೃಷಿ ಭೂಮಿ ಇದೆ, ಅದರಲ್ಲಿ ತೆಂಗು, ಅಡಿಕೆ ಮತ್ತು ಗದ್ದೆ ಇರುತ್ತದೆ. ಸದರಿ ವಾಹನವನ್ನು ಸ್ವಂತ ಉಪಯೋಗಕ್ಕೆ ಹಾಗೂ ಕೃಷಿಗೆ ಉಪಯೋಗಿಸುತ್ತಿದ್ದೇನೆ. ತನಗೆ ವಾಹನ ಚಲಾವಣೆ ಮಾಡಲು ಬರುವುದಿಲ್ಲ. ತನ್ನ ವಾಹನಕ್ಕೆ ಒಬ್ಬ ಪರಿಚಿತರಾದ ಅಶ್ರಫ್‌ರವರನ್ನು ಚಲಾಕರಾಗಿ ನೇಮಕ ಮಾಡಿರುತ್ತೇನೆ. ಅವನಿಗೆ ದಿನಕೂಲಿಯಂತೆ ಸಂಭಾವನೆ ಕೊಡುತ್ತಿದ್ದೇನೆ. ಅವನನ್ನು ಕೆಲಸವಿದ್ದ ಸಮಯದಲ್ಲಿ ಮಾತ್ರ ಕರೆಯುತ್ತಿದ್ದೆ. ಅವನಿಗೆ ದಿನಕ್ಕೆ 100 ರೂಪಾಯಿ ಕೊಡುತ್ತಿದ್ದೆ, ಚಾಲಕನನ್ನು ನೇಮಕ ಮಾಡುವ ಮೊದಲು ಆತನು ಯಾವುದೇ ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿರುವುದಿಲ್ಲ. ಹಾಗೂ ತನ್ನ ವಾಹನವನ್ನು ಯಾವುದೇ ಅಕ್ರಮ ಚಟುವಟಿಕೆಗಳಿಗೆ ಉಪಯೋಗಿಸಬಾರದೆಂದು ಎಚ್ಚರಿಕೆ ಕೊಟ್ಟ ನಂತರ ಅವನನ್ನು ಚಾಲಕ ಹುದ್ದೆಗೆ ನೇಮಕ ಮಾಡಿರುತ್ತೇನೆ. ತನ್ನ ಗಂಡ ಇಂಡಿಯನ್ ಆಯಿಲ್ ಕಾರ್ಪೊರೇಷನ್‌ನಲ್ಲಿ ಗುತ್ತಿಗೆ ಆಧಾರದ ಮೇಲೆ ಸ್ವಂತ ಟ್ಯಾಂಕರನ್ನು ನಡೆಸಿರುತ್ತಾರೆ. ಅವನು ಸುಮಾರು 10.15 ದಿನಗಳಿಗೊಮ್ಮೆ ಮನೆಗೆ ಬರುತ್ತಾರೆ. ತನ್ನ ಮನೆಯಲ್ಲಿ ವಯಸ್ಸಾದ ಅತ್ತೆ ಮಾವಂದಿರೊಂದಿಗೆ ಇರುತ್ತೇನೆ. ತಾನು ದಿನಾಂಕ: 24.7.2001 ರಂದು ಬೆಳಿಗ್ಗೆ 9.00 ಗಂಟೆಗೆ ತಮ್ಮ ವಾಹನದಲ್ಲಿ ಬಾಳೆಕಾಯಿಯನ್ನು ಕೊಟ್ಟು ಸಾಗಿಸಲು ಅಶ್ರಫ್‌ರವರಿಗೆ ವಾಹನವನ್ನು ಕೊಟ್ಟೆನು, ಮತ್ತು ರೂ.3,000/- ನಗದನ್ನು ಆತನಿಗೆ ಕೊಟ್ಟು ಬಾಳೆಕಾಯಿಯನ್ನು ಮಾರಿ, ಅದರಿಂದ ಬಂದ ಹಣ ಹಾಗೂ ಕೊಟ್ಟ 3,000 ಹಣ ಒಟ್ಟು ಸೇರಿ ಬರುವಾಗ ಗೊಬ್ಬರ ತರುವಂತೆ ಆತನಿಗೆ ತಿಳಿಸಿದೆನು. ಆದರೆ ಆತನು ಸಂಜೆ ತನಕ ಬರಲಿಲ್ಲ. ಸಂಜೆ ಸಮಯ ವಿಟ್ಲದಿಂದ ತನಗೆ ಫೋನ್ ಬಂದಿತ್ತು. ತನ್ನ ವಾಹನವನ್ನು ಅಬಕಾರಿ ಇಲಾಖೆಯವರು ವಶಪಡಿಸಿಕೊಂಡಿದ್ದಾರೆ ಎಂಬ ವರ್ತಮಾನ ಬಂತು. ತನ್ನ ವಾಹನವನ್ನು ಅಬಕಾರಿ ಇಲಾಖೆಗೆ ಸಂಬಂಧಿಸಿದ ಯಾವುದೇ ವಸ್ತುಗಳನ್ನು ಅಕ್ರಮವಾಗಿ ಸಾಗಿಸಿದ ವಿಷಯ ತನಗೆ ಪರೋಕ್ಷವಾಗಲೀ ಅಥವಾ ಸ್ವಂತವಾಗಲೀ ತನಗೆ ತಿಳಿದಿಲ್ಲ. ತನ್ನ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲ. ಈ ಪ್ರಕರಣದಲ್ಲಿ ತಾನು ಯಾವುದೇ ಅಪರಾಧ ಮಾಡಿರುವುದಿಲ್ಲವಾದ್ದರಿಂದ ವಾಹನವನ್ನು ತನಗೆ ಬಿಟ್ಟುಕೊಡಲು ಆದೇಶ ನೀಡಬೇಕೆಂದು ಈ ಪ್ರಾಧಿಕಾರದ ಮುಂದೆ ಪ್ರಾರ್ಥಿಸಿಕೊಂಡಿರುತ್ತಾರೆ ಎಂದು ಸಾಕ್ಷಿಯನ್ನು ನುಡಿದಿರುತ್ತಾರೆ.

ಸಹಾಯಕ ಅಭಿಯೋಜಕ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಈ ಪ್ರಾಧಿಕಾರದ ಮಧ್ಯಂತರ ಆದೇಶ ಪಡೆದ ವಾಹನವನ್ನು ತನ್ನ ವಶದಲ್ಲಿದ್ದು, ಯಾವ ಚಾಲಕರಿಗೂ ಕೊಟ್ಟಿರುವುದಿಲ್ಲ. ತನ್ನ ವಾಹನವನ್ನು ತನ್ನ ಗಂಡ ಆಗಾಗ ಚಾಲನೆ ಮಾಡಿರುತ್ತಾರೆ. ಅಶ್ರಫ್ ಈ ಪ್ರಕರಣದ ನಂತರ ತನಗೆ ಸಿಕ್ಕಿರುವುದಿಲ್ಲ. ದಿನಾಂಕ: 24.7.2001 ರಂದು ಸಂಜೆ ಫೋನ್ ಮಾಡಿದ ವ್ಯಕ್ತಿ ಯಾರೆಂದು ತನಗೆ ಗೊತ್ತಿಲ್ಲ. ವಾಹನದೊಂದಿಗೆ ಕಳುಹಿಸಿದ ಬಾಳೆಕಾಯಿ ಹಾಗೂ ನಗದು ಹಣ ರೂ.3,000/- ತನಗೆ ಮರಳಿ ಸಿಗಲಿಲ್ಲ. ಬಾಳೆಕಾಯಿ ಮಾರಿದ ಹಣ ಹಾಗೂ ನಗದು ಹಣದ ಬಗ್ಗೆ ಯಾವುದೇ ಕ್ರಮ ಕೈಗೊಂಡಿಲ್ಲ. ದಿನಾಂಕ: 24.7.2001 ರಂದು ತನ್ನ ವಾಹನದಲ್ಲಿ ಅಕ್ರಮ ಸಾಗಾಣಿಕೆ ನಡೆದ ವಿಷಯ ತನಗೆ ಮೊದಲೇ ಗೊತ್ತಿತ್ತು ಎಂದರೆ ಸರಿಯಲ್ಲ. ತನ್ನ ಮನೆಯಿಂದ ವಿಟ್ಲ ಪೇಟೆಗೆ 20 ಕಿ.ಮೀ. ಅಂತರವಿರುತ್ತದೆ. ಈ ಪ್ರಾಧಿಕಾರದ ಮುಂದೆ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ನುಡಿದಿರುತ್ತಾರೆ.

ಈ ಸಾಕ್ಷಿ ಹೇಳಿಕೆಯಿಂದ ಈ ಪ್ರಕರಣದಲ್ಲಿ ನೀಡಿರುವ ಸಾಕ್ಷಿ ಹೇಳಿಕೆಗಳು ಒಂದಕ್ಕೊಂದು ತಾಳೆಯಾಗಿರುವುದಿಲ್ಲ.

1) ಮಹಜರ್‌ನಲ್ಲಿ ಯಾವುದೇ ಸ್ವತಂತ್ರ ಸಾಕ್ಷಿರವರ ಸಹಿಯನ್ನು ಅಥವಾ ಹೇಳಿಕೆಯನ್ನು ಪಡೆದುಕೊಂಡಿರುವುದಿಲ್ಲ.

2) ಮಹಜರನ್ನು ತಯಾರಿಸುವಾಗ ಸ್ಥಳದ ಚೆಕ್ ಬಂದಿಯನ್ನು ನಮೂದಿಸಿರುವುದಿಲ್ಲ ಹಾಗೂ ತಕ್ಷೀರು ಸ್ಥಳಕ್ಕೆ ಹೋದ ವಾಹನದ ನೋಂದಣಿ ಸಂಖ್ಯೆಯನ್ನು ಮಹಜರ್‌ನಲ್ಲಿ ನಮೂದಿಸಿರುವುದಿಲ್ಲ.

3) ವಾಹನವನ್ನು ತಪಾಸಣೆ ಮಾಡುವ ಮೊದಲು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 54 ರಡಿಯಲ್ಲಿ ಒಂದು ಸರ್ಚ್ ಮೆಮೋವನ್ನು ತಯಾರಿಸಿರುವುದು ಅಥವಾ ವಾರಂಟ್ ಪಡೆದುಕೊಳ್ಳದಿದ್ದುದಕ್ಕೆ ಕಾರಣಗಳನ್ನು ನಮೂದಿಸಿ ಯಾವುದೇ ಮೆಮೋವನ್ನು ತಯಾರಿಸಿರುವುದಿಲ್ಲ ಮತ್ತು ಕಾರಣಗಳನ್ನು ಮಹಜರಿನಲ್ಲಿ ನಮೂದಿಸಿರುವುದಿಲ್ಲ.

4) ರಾಸಾಯನಿಕ ಪರೀಕ್ಷೆಗಾಗಿ ತೆಗೆದ ಮಾದರಿ ಸೀಸೆಗಳನ್ನು ನಿರ್ದಿಷ್ಟವಾದ ಯಾವ ಪೆಟ್ಟಿಗೆಯಿಂದ ತೆಗೆದಿರುತ್ತೇನೆ ಎಂದು ಮಹಜರ್‌ನಲ್ಲಿ ನಮೂದಿಸಿರುವುದಿಲ್ಲ.

5) ಮಹಜರ್‌ನಲ್ಲಿ ರಕ್ಷಕರ ಸಹಿ ಹೊರತು ಬೇರೆ ಯಾವುದೇ ಅಂದರೆ ವಾಹನ ಚಾಲಕರ ಸಹಿಯನ್ನು ಪಡೆದುಕೊಂಡಿರುವುದಿಲ್ಲ. ಹಾಗೂ ಪಂಚರ ಸಾಕ್ಷಿದಾರರ ಸಹಿ ಪಡೆಯಲಾಗಿರುವುದಿಲ್ಲ.

ವಾಹನ ಮಾಲೀಕರು ಕೃಷಿಕಳಾಗಿದ್ದು, ತನಗೆ 15 ಎಕರೆ ಕೃಷಿ ಭೂಮಿ ಇದ್ದು ಅದರಲ್ಲಿ ತೆಂಗು, ಅಡಿಕೆ ಮತ್ತು ಗದ್ದೆ ಇದ್ದು, ವಾಹನವನ್ನು ತನ್ನ ದಿನನಿತ್ಯ ಕೃಷಿಗೆ ಉಪಯೋಗಿಸಿರುವುದು ಖಚಿತವಾಗಿರುತ್ತದೆ. ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆ ಮಾಡಿರುವ ವಿಷಯ ವಾಹನ ಮಾಲೀಕರ ತಿಳುವಳಿಕೆಗೆ ಬಾರದೆ ನಡೆದಿರುತ್ತದೆ ಎಂದು ಸಾಕ್ಷಿಗಳ ವಿಚಾರಣೆ ಹೇಳಿಕೆ ದಿನಾಂಕ: 24.7.2001ರ ಸಂದರ್ಭದಲ್ಲಿ ಅಕ್ರಮ ಸೊತ್ತುಗಳೊಂದಿಗೆ ವಾಹನ ಟಾಟಾ ಸುಮೊ ಕಾರು ಸಂಖ್ಯೆ: ಕೆಎ-05-ಎನ್-2496ನ್ನು ಇಲಾಖಾಧಿಕಾರಿಗಳು ವಶಪಡಿಸಿಕೊಂಡ ಸಂದರ್ಭದಲ್ಲಿ ವಾಹನ ಚಾಲಕನು ಹಾಗೂ ಇನ್ನಿತರ ವ್ಯಕ್ತಿಗಳು ಪರಾರಿಯಾಗಿರುವುದಾಗಿ ತಿಳಿಸಿರುವ ಅಂಶವನ್ನು ಹಾಗೂ ಸದರಿ ಚಾಲಕ ಮತ್ತು ಇನ್ನಿತರರು ಇಲ್ಲಿಯವರೆಗೂ ತಲೆಮರೆಸಿಕೊಂಡು ಪತ್ತೆಯಾಗದೆ ವಾಹನ ಮಾಲೀಕರಿಗೆ ಯಾವುದೇ ಮಾಹಿತಿ ನೀಡದೆ ಇರುವುದರಿಂದ ಸದರಿ ಅಕ್ರಮ ಸಾಗಾಣಿಕೆ ಕ್ರಿಯೆಯನ್ನು ಚಾಲಕ ಹಾಗೂ ಇನ್ನೀತರರು ಸಂಚು ಹೂಡಿ ಮಾಲೀಕರು ಉದ್ದೇಶಿತ ವ್ಯವಹಾರಕ್ಕೆ ಲಭ್ಯವಿದ್ದ ವಾಹನವನ್ನು ದುರುಪಯೋಗ ಮಾಡಿ ಅಕ್ರಮ ಮದ್ಯ ಸಾಗಾಣಿಕೆಯನ್ನು ಆರ್.ಸಿ. ಮಾಲೀಕರ ತಿಳುವಳಿಕೆಗೆ ಬಾರದೇ ಮಾಡಿರುವ ಕೃತ್ಯ ಎಂದು ಈ ಪ್ರಾಧಿಕಾರವು ನಂಬಬಹುದಾಗಿರುತ್ತದೆ. ಈ ವಿಷಯ ವಾಹನ ಮಾಲೀಕರ ತಿಳುವಳಿಕೆಗೆ ಬಾರದೇ ನಡೆದಿರುತ್ತದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ. ವಾಹನ ಮಾಲೀಕರು ನಿರಕ್ಷರಸ್ಥೆಯಾಗಿದ್ದು, ಅಲ್ಲದೆ ವಾಹನ ಮಾಲೀಕರು ಅಪರಾಧ ಸ್ಥಳದಿಂದ ಸುಮಾರು 20 ಕಿ.ಮೀ. ದೂರದ ಹಳ್ಳಿಯಲ್ಲಿ ನೆಲೆಸಿದ್ದು, ವಾಹನವನ್ನು ಚಾಲಕನ ಸುಪರ್ಧಿಗೆ ಕೃಷಿಯ ವ್ಯವಹಾರಕ್ಕೆ ನೀಡಿರುವುದು ಸಾಕ್ಷ್ಯಾಧಾರಗಳಿಂದ ವಿಚಾರಣೆಯಿಂದ ತಿಳಿದು ಬರುತ್ತದೆ. ವಾಹನದ ಆರ್.ಸಿ. ಮಾಲೀಕರು ಸದರಿ ಅಕ್ರಮ ಮದ್ಯ ಸಾಗಾಣಿಕೆಯಲ್ಲಿ ತನ್ನ ವಾಹನವನ್ನು ತನ್ನ ತಿಳುವಳಿಕೆಯಿಂದಲೇ ಈ ಕೃತ್ಯವು ನಡೆದಿದೆ ಎಂದು ಹೇಳಲು ಯಾವುದೇ ನಿರ್ದಿಷ್ಟವಾದ ಸಾಕ್ಷ್ಯಾಧಾರಗಳ ಕೊರತೆ ಇರುವುದರಿಂದ ಹಾಗೂ ಪ್ರಕರಣವನ್ನು ಹಗಲು 11.45 ರಲ್ಲಿ ಪತ್ತೆಯಾಗಿದ್ದು, ಅಪರಾಧ ಸ್ಥಳದಲ್ಲಿ ತಯಾರಿಸಲಾಗಿರುವ ಸ್ಥಳ ಮಹಜರಿಗೆ ಯಾವೊಬ್ಬರೂ ಪಂಚರನ್ನು, ಸಾಕ್ಷಿದಾರರನ್ನಾಗಿ ಪಡೆಯಲಾಗದಿರುವುದು, ಫಿರ್ಯಾದುದಾರರು ದಾಖಲಿಸಿರುವ ಮೊಕದ್ದಮೆ ಸಂಶಯಕ್ಕೆ ಆಸ್ಪದ ಉಂಟುಮಾಡಿರುತ್ತದೆ. ಆರ್.ಸಿ. ಮಾಲೀಕಳು ಮಹಿಳೆಯಾಗಿದ್ದು ಸದರಿ ವಾಹನವನ್ನು ಚಾಲಕನ ಸುಪರ್ಧಿಯಲ್ಲಿ ದಿನಾಂಕ: 24.7.2001 ರಂದು ತನ್ನ ಸ್ವಂತ ಕಾರ್ಯದ ನಿಮಿತ್ತ ನೀಡಿದ್ದು

ತದನಂತರ ಸದರಿ ಚಾಲಕನು ಸಂಚು ಹೂಡಿ ಆರ್.ಸಿ. ಮಾಲೀಕರ ಗಮನ ತಪ್ಪಿಸಿ, ವಾಹನದಲ್ಲಿ ಅಕ್ರಮ ಮದ್ಯ ಸಾಗಿಸಿರುವ ಸಂದರ್ಭವಾಗಿದ್ದು ದಿನಾಂಕ: 24.7.2001 ರಂದು ಸದರಿ ವಾಹನದಲ್ಲಿ ಚಾಲಕನು ವಾಹನದ ಆರ್.ಸಿ. ಮಾಲೀಕರ ಗಮನ ತಪ್ಪಿಸಿ ವಾಹನವನ್ನು ಅಕ್ರಮ ಮದ್ಯಸಾಗಾಣಿಕೆಗೆ ಬಳಸಿರುವುದು ಲಭ್ಯವಿರುವ ದಾಖಲೆ ಹಾಗೂ ಸಾಕ್ಷಿಗಳ ಹೇಳಿಕೆಗಳ ಆಧಾರಗಳಿಂದ ಈ ಪ್ರಧಿಕಾರವು ಮೂರನೇ ವಿವಾದಾಂಶವನ್ನು ನಕರಾತ್ಮಕವಾಗಿ ಪರಿಗಣಿಸಿದೆ. ಹಾಗೂ ಈ ಕೆಳಕಂಡ ಆದೇಶವನ್ನು ಹೊರಡಿಸಲು ತೀರ್ಮಾನಿಸಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ:32:ಡಿಟಿಸಿಆರ್:2001-02, ದಿನಾಂಕ: 26ನೇ ಫೆಬ್ರವರಿ 2005**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ) ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಮೊಕದ್ದಮೆ ಸಂಖ್ಯೆ: 3/2001-02, ದಿನಾಂಕ: 24.7.2001 ರಲ್ಲಿ ಜಪ್ತುಪಡಿಸಿರುವ ವಾಹನ ಟಾಟಾ ಸುಮೊ ಸಂಖ್ಯೆ: ಕೆಎ-05-ಎನ್-2496ನ್ನು ನಿಯಮ 43ಎ(2) ರನ್ವಯ ಈ ಪ್ರಾಧಿಕಾರದ ದಿನಾಂಕ: 25.8.2001ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ, ಸದ್ರಿ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀಮತಿ ತಾರಾಶ್ರೀ ಶ್ರೀಧರ ಶೆಟ್ಟಿ, ಕೋಂ ಶ್ರೀಧರ ಶೆಟ್ಟಿ, ವಾಸ: ಶ್ರೀ ಕೃಷ್ಣ ನಿಲಯ, ಮನೆ ನಂಬರ್ 5-110, ಕರೋಪಾಡಿ ಗ್ರಾಮ, ಕನ್ಯಾನ ಪೋಸ್ಟ್, ಬಂಟ್ವಾಳ ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಲು ಆದೇಶ ನೀಡಿರುತ್ತೇನೆ. ಆರ್.ಸಿ. ಮಾಲೀಕರು ತಾತ್ಕಾಲಿಕ ನೆಲೆಯಲ್ಲಿ ವಾಹನವನ್ನು ಬಿಡುಗಡೆಗೊಳಿಸುವ ಸಂದರ್ಭದಲ್ಲಿ ಈ ಪ್ರಾಧಿಕಾರಕ್ಕೆ ನೀಡಿರುವ ರೂ.60,000/- ಬ್ಯಾಂಕ್ ಗ್ಯಾರಂಟಿಯನ್ನು ಹಿಂತಿರುಗಿಸಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 26.02.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ-1: - ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ.
ಪ್ರಾ.ಸಾ-2: - ಶ್ರೀ ಭುಜಂಗ ರಾವ್, ಅಬಕಾರಿ ಮುಖ್ಯ ರಕ್ಷಕ, ಬಂಟ್ವಾಳ ವಲಯ.
ಪ್ರಾ.ಸಾ-3: - ಶ್ರೀ ರವೀಂದ್ರ ಕೋಟೆಕಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಕುಂದಾಪುರ ವಲಯ.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1: - ನ್ಯಾಯಾಲಯಕ್ಕೆ ಸಲ್ಲಿಸಬೇಕಾಗಿರುವ ದೋಷಾರೋಪಣಾ ಪತ್ರದ ವಾಯಾ ಪ್ರತಿ
ನಿಶಾನೆ ಪಿ-2: - ಪ್ರಥಮ ಮಾಹಿತಿ ವರದಿಯ ವಾಯಾ ಪ್ರತಿ
ನಿಶಾನೆ ಪಿ-3: - ಯಾದಾಸ್ತಿನ ವಾಯಾ ಪ್ರತಿ

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:**

ಶ್ರೀಮತಿ ತಾರಾಶ್ರೀ ಶ್ರೀಧರ ಶೆಟ್ಟಿ, ಕೋಂ ಶ್ರೀಧರ ಶೆಟ್ಟಿ, ವಾಸ: ಶ್ರೀ ಕೃಷ್ಣ ನಿಲಯ, ಮನೆ ನಂಬರ್ 5-110, ಕರೋಪಾಡಿ ಗ್ರಮ, ಕನ್ಯಾನ ಪೋಸ್ಟ್, ಬಂಟ್ವಾಳ.

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

- ಯಾವುದೂ ಇರುವುದಿಲ್ಲ -

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಪಿ.ಆರ್. 461 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಎಸ್‌ಡಿಕೆ/266/ಡಿಟಿಸಿಆರ್/2000-01, ದಿನಾಂಕ: 9ನೇ ಫೆಬ್ರವರಿ 2005**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** ವಿರುದ್ಧ
ಅಬಕಾರಿ ನಿರೀಕ್ಷಕರು,
ನಂ.1 ಇಐಬಿ, ಮಂಗಳೂರು ವಿಭಾಗ,
ಮಂಗಳೂರು.

**ಆರೋಪಿಗಳು:**
1) ಶ್ರೀ ರಾಧಕೃಷ್ಣ, (24 ವರ್ಷ) ಬಿನ್ ನರಸಪ್ಪ, ಸಮುದ್ರಹಳ್ಳಿ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ.
2) ರಾಜಣ್ಣ (36 ವರ್ಷ) ಬಿನ್ ಬಸಪ್ಪ, ಮಂಚಿ ಬ್ಯಾಡರಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ.
3) ರಘುಪ್ರಕಾಶ್ ಎಂ. ಬಿನ್ ಟಿ. ಮಹಾದೇವ, ಶ್ರೀ ರಾಜೇಶ್ವರಿ ನಿಲಯ, ಮುಖ್ಯರಸ್ತೆ, ಕೊಳ್ಳೆಗಾಲ ತಾಲ್ಲೂಕು.

**ವಾಹನ ಮಾಲೀಕರು:**
ಶ್ರೀ ಎಂ. ರಘುಪ್ರಕಾಶ್, ನಂ.44/1 6ನೇ ಕ್ರಾಸ್, ವಿನಾಯಕ ನಗರ, ಬನಶಂಕರಿ 3ನೇ ಸ್ಟೇಜ್, ಕುಟ್ಟಿಗುಡ್ಡೆ, ಬೆಂಗಳೂರು-560085.

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ನಿರೀಕ್ಷಕರು, ನಂ.1 ಇಐಬಿ ಮಂಗಳೂರು ವಿಭಾಗ, ಮಂಗಳೂರುರವರು ದಿನಾಂಕ: 5.1.2001 ರಂದು ತಮ್ಮ ಸಿಬ್ಬಂದಿಯವರೊಂದಿಗೆ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ಪರಂಗಿಪೇಟೆ ಬಳಿ ರಸ್ತೆಗಾವಲು ನಡೆಸಿ ವಾಹನ ತಪಾಸಣೆ ಮಾಡುತ್ತಿರುವ ಸಮಯದಲ್ಲಿ ಬಂಟ್ವಾಳ ಕಡೆಯಿಂದ ಬಂದ ವಾಹನ ಸಂಖ್ಯೆ: ಕೆಎಲ್-10-1908ನ್ನು ನಿಲ್ಲಿಸಲು ಸೂಚನೆ ನೀಡಿದಾಗ ವಾಹನ ಚಾಲಕನು ಸದರಿ ವಾಹನವನ್ನು ನಿಲ್ಲಿಸಿದನು. ಚಾಲಕನಲ್ಲಿ ಲಾರಿಯಲ್ಲಿದ್ದ ಸರಕಿನ ಬಗ್ಗೆ ವಿಚಾರಿಸಿದಾಗ, ಲಾರಿಯಲ್ಲಿ ಸಿಮೆಂಟ್‌ನಿಂದ ಮಾಡಲ್ಪಟ್ಟ ಇಟ್ಟಿಗೆಗಳು ತುಂಬಿರುವುದಾಗಿ ತಿಳಿಸಿ ಈ ಸಂಬಂಧ ಜಿ ಮತ್ತು ಎಸ್. ಎಸೋಸಿಯೇಟ್ಸ್ 39 ಗಾರ್ಡನ್ ರಸ್ತೆ, ಅಗ್ರಹಾರ, ತುಮಕೂರು ರವರಿಂದ ಮಾರುತಿ ಎಂಟರ್ ಪ್ರೈಸಸ್, C/o ವಿಷ್ಣು ಎಂಟರ್ ಪ್ರೈಸಸ್, ಪಣಂಬೂರು ನ್ಯೂ ಮಂಗಳೂರುರವರಿಗೆ ನೀಡಿದ ಇನ್‌ವಾಯ್ಸ್ ಸಂಖ್ಯೆ: 081ನ್ನು ಹಾಜರುಪಡಿಸಿರುತ್ತಾರೆ. ಲಾರಿಯ ಒಳಗಡೆ ಮದ್ಯದ ವಾಸನೆ ಬರುತ್ತಿರುವುದರಿಂದ ಅನುಮಾನದ ಮೇರೆಗೆ ಲಾರಿಯ ಒಳಗಡೆ ಇದ್ದ ಇಟ್ಟಿಗೆಗಳನ್ನು ಸರಿಸಿ, ನೋಡಲಾಗಿ ಅದರಡಿಯಲ್ಲಿ ಮದ್ಯದ ರಟ್ಟಿನ ಪೆಟ್ಟಿಗೆಗಳಿರುವುದು ಕಂಡುಬಂತು, ಮದ್ಯದ ರಟ್ಟಿನ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರಗಳನ್ನು ಹಾಜರುಪಡಿಸುವಂತೆ ಚಾಲಕ ಹಾಗೂ ಸಹಾಯಕನಲ್ಲಿ ಕೇಳಲಾಗಿ ತನ್ನ ಬಳಿ ಯಾವುದೇ ಮದ್ಯದ ರಟ್ಟಿನ ಪೆಟ್ಟಿಗೆಗೆ ಸಂಬಂಧಿಸಿ ಯಾವುದೇ ರಹದಾರಿ ಪತ್ರಗಳು ಇರುವುದಿಲ್ಲವೆಂದು ತಿಳಿಸಿರುವ ಮೇರೆಗೆ ಇದು ಮದ್ಯಸಾಗಾಣಿಕೆ ಮಾಡುವುದು ಕರ್ನಾಟಕ ಅಬಕಾರಿ ಕಾಯ್ದೆ ಕಾನೂನುಗಳ ಉಲ್ಲಂಘನೆಯಾಗಿರುತ್ತದೆ ಎಂದು ಅಪರಾಧಿಗಳಿಗೆ ತಿಳಿಸಿ, ಮುಂದಿನ ಕ್ರಮ ಕೈಗೊಳ್ಳಲು ಸ್ಥಳದಲ್ಲಿ ಹಾಜರಿದ್ದ ಪಂಚರನ್ನು ಕರೆಯಿಸಿಕೊಂಡು ಘನ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೋವನ್ನು ತಯಾರಿಸಿ ಲಾರಿಯ ಒಳಗಡೆ ಇಟ್ಟಿಗೆಗಳ ಅಡಿಯಲ್ಲಿ ಇದ್ದ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ಪರಿಶೀಲಿಸಿದಾಗ ಅವುಗಳ ಈ ಕೆಳಗಿನಂತಿರುತ್ತದೆ.

| ಮದ್ಯದ ವಿವರ | ಸೀಸೆಗಳಲ್ಲಿ | | | ಪೆಟ್ಟಿಗೆಗಳು | ಲೀಟರುಗಳು |
|---|---|---|---|---|---|
| | 750 ಎಂಎಲ್ | 375 ಎಂಎಲ್ | 180 ಎಂಎಲ್ | | |
| ನಂ.1 ಹೈವೇ ವಿಸ್ಕಿ | 864 | 1152 | 3600 | 195 | 1728.000 |
| ಡೈಮಂಡ್ ಡಿಲಕ್ಸ್ ವಿಸ್ಕಿ | 120 | - | 960 | 30 | 262.800 |
| ರಾಜಾ ವಿಸ್ಕಿ | 120 | - | 240 | 15 | 133.200 |
| ರಾಜಾ ಜಿನ್ | - | - | 192 | 4 | 34.560 |
| ಒಟ್ಟು | 1104 | 1152 | 4992 | 244 | 2158.560 |

ಸದರಿ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ 750 ಎಂಎಲ್‌ನ 5 ಸೀಸೆ.375 ಎಂಎಲ್‌ನ 1 ಸೀಸೆ ಮತ್ತು 180 ಎಂಎಲ್‌ನ 6 ಸೀಸೆಗಳನ್ನು ತೆಗೆದುಕೊಂಡು ಅದರ ಮೇಲೆ ಮೊಹರು ಮಾಡಿರುತ್ತಾರೆ. ಮೊಹರಿನ ಮಾದರಿಯನ್ನು ತಯಾರಿಸಿ ಪಂಚರ ಸಹಿ ಪಡೆದಿರುತ್ತಾರೆ. ಸದರಿ ಮದ್ಯವನ್ನು ಜೆ.ಪಿ.ಡಿಸ್ಟಿಲರಿ ಪ್ರೈವೇಟ್ ಲಿಮಿಟೆಡ್ ಬೆಂಗಳೂರು ಎಂದು ಆಂಗ್ಲ ಭಾಷೆಯಲ್ಲಿ ನಮೂದಿಸಿರುತ್ತಾರೆ. ಆರೋಪಿಗಳ ವಿಳಾಸ ಕೇಳಲಾಗಿ ಚಾಲಕ ತನ್ನ ಹೆಸರು ರಾಧಕೃಷ್ಣ ಬಿನ್ ನರಸಪ್ಪ, ಸಮುದ್ರಹಳ್ಳಿ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ, ಸಹಾಯಕ ರಾಜಣ್ಣ, ಬಿನ್ ಬಸಪ್ಪ, ಮಂಚಿ ಬ್ಯಾಡರ ಹಳ್ಳಿ, ಅಣವೆ ಅಂಚೆ, ದೊಡ್ಡ ಬಳ್ಳಾಪುರ, ಬೆಂಗಳೂರು ಎಂದು ತಿಳಿಸಿರುತ್ತಾರೆ. ಲಾರಿಯ ಒಳಗಡೆ ತಪಾಸಣೆ ಮಾಡಲಾಗಿ ಇನ್ಸೂರೆನ್ಸ್ ಹಾಗೂ ಆರ್.ಸಿ. ಪುಸ್ತಕ ದೊರೆತಿದ್ದು, ಆರ್.ಸಿ. ಪುಸ್ತಕದ ಪ್ರಕಾರ ಮಾಲೀಕನ ಹೆಸರು ಎಂ. ರಘುಪ್ರಕಾಶ್ ಬಿನ್ ಟಿ. ಮಹಾದೇವ ರಾಜೇಶ್ವರಿ ನಿಲಯ, ರಾಮಪುರ ಮುಖ್ಯರಸ್ತೆ, ಕೊಳ್ಳೆಗಾಲ ತಾಲ್ಲೂಕು ಆಗಿರುತ್ತದೆ. ಲಾರಿಯು ಅಶೋಕ್ ಲೈಲಾಂಡ್ ಕಂಪೆನಿಯಾಗಿದ್ದು, ಇವರ ನೋಂದಣಿ ಸಂಖ್ಯೆ: ಕೆಎಲ್-10-1908 ಆಗಿದ್ದು, ಇದರ ಇಂಜಿನ್ ನಂಬರ್:ಎಫ್‌ಪಿ೯:124531 ಮತ್ತು ಚಾಸಿಸ್ ಸಂಖ್ಯೆ: ಎಫ್‌ಪಿ೯:246713 ಆಗಿರುತ್ತದೆ. ಇದು ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ಎಂಬ ವಿಚಾರವನ್ನು ಆರೋಪಿಗಳಿಗೆ ತಿಳಿಸಿ ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಮದ್ಯ ಹಾಗೂ ಸಾಗಾಣಿಕೆಗೆ ಬಳಸಿದ ಲಾರಿ ಮತ್ತು 2150 ಸಿಮೆಂಟ್ ಇಟ್ಟಿಗೆಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲೇ ಬರೆದು ಮಹಜರಿನಲ್ಲಿ ಪಂಚರ ಹಾಗೂ ಸಿಬ್ಬಂದಿಯವರ ಸಹಿಯನ್ನು ಪಡೆದು ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ: 19/2000-01 ದಿನಾಂಕ: 5.1.2001 ರಂದು ಮೊಕದ್ದಮೆ ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ವರದಿ ಸಲ್ಲಿಸಿ, ಈ ಪ್ರಾಧಿಕಾರದ ಆದೇಶದ ಮೇರೆಗೆ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ವಾಹನ ಆರ್.ಸಿ. ಮಾಲೀಕರಾದ ಶ್ರೀ ರಘುಪ್ರಕಾಶ್, ಶ್ರೀ ರಾಜೇಶ್ವರಿ ನಿಲಯ, ರಾಮಪುರಂ ಮುಖ್ಯ ರಸ್ತೆ, ಕೊಳ್ಳೆಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆರವರು ಈ ಪ್ರಾಧಿಕಾರಕ್ಕೆ ದಿನಾಂಕ: 24.1.2001 ರಂದು ಅರ್ಜಿಸಲ್ಲಿಸಿ, ಸದರಿ ವಾಹನದ ತನ್ನ ಗಮನಕ್ಕೆ ಬಾರದೇ ಮದ್ಯಸಾಗಾಣಿಕೆಯಾಗಿರುವುದು ಗೊತ್ತಿರುವುದಿಲ್ಲ. ಸದರಿ ವಾಹನವನ್ನು ತನಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಅರ್ಜಿಯನ್ನು ಈ ಪ್ರಾಧಿಕಾರವು ಪರಿಶೀಲಿಸಿ ಲಾರಿ ಅಶೋಕ್ ಲೈಲಾಂಡ್ ಸಂಖ್ಯೆ: ಕೆಎಲ್-10-1908ರ ವಿಲೇವಾರಿ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ಪತ್ರ ಬರೆದು ಲಾರಿಯ ಮಾರುಕಟ್ಟೆಯ ಮೌಲ್ಯವನ್ನು ನಿಗದಿಪಡಿಸಿ ದೃಢೀಕರಣ ಪತ್ರ ನೀಡಬೇಕೆಂದು ಕೋರಿರುವ ಮೇರೆಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದ.ಕ.ಜಿಲ್ಲೆ, ಮಂಗಳೂರುರವರ ಪತ್ರ ಸಂಖ್ಯೆ: ದಿನಾಂಕ: 1.2.2001 ರಂದು ವಾಹನದ ಪ್ರಸ್ತುತ ಮೌಲ್ಯ ರೂ.64,500/- ಗಳಾಗಬಹುದೆಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ:266:ಡಿಟಿಸಿಆರ್: 2000-01, ದಿನಾಂಕ: 4.5.2001 ರಲ್ಲಿ ಅರ್ಜಿದಾರರು ಈ ಪ್ರಾಧಿಕಾರದ ಹೆಸರಿಗೆ ರೂ.65,000/- ಮೊತ್ತದ ಬ್ಯಾಂಕ್ ಗ್ಯಾರೆಂಟಿ ನೀಡಿದ್ದಲ್ಲಿ ಜಪ್ತು ಮಾಡಲ್ಪಟ್ಟ ವಾಹನ ಸಂಖ್ಯೆ: ಕೆಎಲ್-10-1908 ಅಶೋಕ್ ಲೈಲಾಂಡ್ ಲಾರಿಯನ್ನು ಷರತ್ತುಗೊಳಪಟ್ಟು, ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ. ಸದರಿ ಆದೇಶದ ಅನುಸಾರ ಅರ್ಜಿದಾರರು ರೂ.65,000/- ಬ್ಯಾಂಕ್ ಗ್ಯಾರಂಟಿಯನ್ನು ಈ ಪ್ರಾಧಿಕಾರದ ಹೆಸರಿಗೆ ನೀಡಿರುತ್ತಾರೆ.

ಅರ್ಜಿದಾರರು ವಿಜಯಬ್ಯಾಂಕ್, ಜಯನಗರ 3ನೇ ಬ್ಲಾಕ್, ಬೆಂಗಳೂರು ಇಲ್ಲಿಂದ ರೂ.65,000/-ದ ಬ್ಯಾಂಕ್ ಗ್ಯಾರಂಟಿಯನ್ನು ಈ ಪ್ರಾಧಿಕಾರಕ್ಕೆ ನೀಡಿರುವುದರಿಂದ ವಶಪಡಿಸಿಕೊಂಡ ಲಾರಿ ಸಂಖ್ಯೆ: ಕೆಎಲ್-10-1908ನ್ನು ಅರ್ಜಿದಾರರ ವಶಕ್ಕೆ ಸೂಕ್ತ ಮುಚ್ಚಳಿಕೆ ಪಡೆದು ಬಿಡುಗಡೆಗೊಳಿಸಲು ಈ ಪ್ರಾಧಿಕಾರದ ಆದೇಶ ಸಂಖ್ಯೆ ದಿನಾಂಕ: 31.5.2001 ರಂದು ಆದೇಶಿಸಿರುತ್ತಾರೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಬಂಟ್ವಾಳ್ ವಲಯರವರ ಪತ್ರ ಸಂಖ್ಯೆ: ಇಎಕ್ಸ್‌ಇ:ಬಿಎನ್‌ಟಿ:ಸಿಆರ್‌ಎಂ:38:2000-01, ದಿನಾಂಕ: 28.3.2001 ರಲ್ಲಿ ವಶಪಡಿಸಿಕೊಂಡ ಮದ್ಯವು ರಾಸಾಯನಿಕ ವಿಶ್ಲೇಷಕರ ಪ್ರಕಾರ ಮಾನವ ಸೇವನೆಗೆ ಯೋಗ್ಯವಾಗಿರುವುದೆಂದು ವರದಿ ಮಾಡಿರುವ ಮೇರೆಗೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುವ ಮೇರೆಗೆ ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ: 24.5.2001 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶಿಸಿರುತ್ತಾರೆ.

ಈ ಪ್ರಾಧಿಕಾರವು ಅರ್ಜಿದಾರರಿಗೆ ದಿನಾಂಕ: 17.3.2001 ರಂದು ಕಾರಣ ಕೇಳಿ ನೀಡಲಾದ ನೋಟೀಸಿಗೆ ದಿನಾಂಕ: 10.4.2001 ರಂದು ಉತ್ತರ ಸಲ್ಲಿಸಿ ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನ ಪರ ಪಿರ್ಯಾದಿ, ಹಾಗೂ ಪ್ರಕರಣದಲ್ಲಿ ಪ್ರತಿರಕ್ಷೆ ಪರ ಯಾವುದೇ ಸಾಕ್ಷಿ ಹಾಗೂ ವಾಹನ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಿ ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಿಧಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ: 5.1.2001 ರಂದು ವಾಹನ ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಕೆಎಲ್-10-1908 ರಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡಲಾಗಿತ್ತೇ?

2) ಸದರಿ ವಾಹನ ಮಾಲೀಕರು ತಾವೆಂದೂ ಮತ್ತು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಸಾಬೀತು ಪಡಿಸಿದ್ದಾರೆಯೇ?

3) ಜಪ್ತುಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲೆಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, 2ನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ 3ನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ-1:**

ಶ್ರೀ ಆರ್.ಜೆ. ಜ್ವಾಲಣ್ಣ, ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ದಿನಾಂಕ: 6.11.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ತಾನು ದಿನಾಂಕ: 05.1.2001 ರಂದು ತಮ್ಮ ಸಿಬ್ಬಂದಿಗಳೊಂದಿಗೆ ಬಂಟ್ವಾಳ ತಾಲ್ಲೂಕು ಫರಂಗಿಪೇಟೆ ಬಳಿ ರಸ್ತೆಗಾವಲು ನಡೆಸುತ್ತಿದ್ದ ಸಂದರ್ಭದಲ್ಲಿ ಮಧ್ಯಾಹ್ನ 1.30 ಗಂಟೆಗೆ ಬಂಟ್ವಾಳ ಕಡೆಯಿಂದ ಮಂಗಳೂರು ಕಡೆಗೆ ಲಾರಿ ಸಂಖ್ಯೆ: ಕೆಎಲ್-10-1908ನ್ನು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ವಾಹನವನ್ನು ನಿಲ್ಲಿಸಿದನು. ಸರಕಿನ ಬಗ್ಗೆ ಚಾಲಕನಲ್ಲಿ ವಿಚಾರಿಸಲಾಗಿ ಚಾಲಕನು ವಾಹನದಲ್ಲಿ ಸಿಮೆಂಟ್ ಇಟ್ಟಿಗೆಗಳು ಇರಿಸಿರುವುದಾಗಿ ತಿಳಿಸಿ, ಇನ್‌ವಾಯ್ಸ್‌ನ್ನು ಹಾಜರು ಪಡಿಸಿದ್ದು ಸದರಿ ಇನ್‌ವಾಯ್ಸ್‌ನ್ನು ಕೂಲಂಕುಷವಾಗಿ ಪರಿಶೀಲಿಸಿ ಅನುಮಾನದ ಮೇರೆಗೆ ಸಿಮೆಂಟ್ ಇಟ್ಟಿಗೆಗಳನ್ನು ಸರಿಸಿ ನೋಡಲಾಗಿ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡು ಬಂತು, ಮದ್ಯದ ರಟ್ಟಿನ ಪೆಟ್ಟಿಗೆಗಳನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರಗಳನ್ನು ಹಾಜರುಪಡಿಸುವಂತೆ ವಾಹನ ಚಾಲಕ ಹಾಗೂ ಆತನ ಜೊತೆಯಲ್ಲಿದ್ದ, ಸಹಾಯಕನನ್ನು ವಿಚಾರಿಸಿದಾಗ ತನ್ನ ಬಳಿ ಯಾವುದೇ ರಹದಾರಿ ಪತ್ರ ಇಲ್ಲವೆಂದು ತಿಳಿಸಿರುತ್ತಾನೆ. ಆದುದರಿಂದ ಯಾವುದೇ ರಹದಾರಿ ಪತ್ರವಿಲ್ಲದೇ ಮದ್ಯಸಾಗಾಣಿಕೆ ಮಾಡುವುದು ಕರ್ನಾಟಕ ಅಬಕಾರಿ ಕಾನೂನುಗಳ ಪ್ರಕಾರ ಉಲ್ಲಂಘನೆಯಾಗಿರುವುದು ಎಂಬ ವಿಚಾರವನ್ನು ಇಬ್ಬರಿಗೆ ತಿಳಿಸಿ, ಮುಂದಿನ ಕ್ರಮದ ಬಗ್ಗೆ ವಾಹನದಲ್ಲಿದ್ದ ಮದ್ಯದ ಪೆಟ್ಟಿಗೆಗಳನ್ನು ಲೆಕ್ಕ ಮಾಡಲಾಗಿ ವಿವಿಧ ಬಗ್ಗೆಯ ಒಟ್ಟು 244 ಪೆಟ್ಟಿಗೆಗಳಿರುವುದು ಕಂಡುಬಂತು. ರಾಸಾಯನಿಕ ಪರೀಕ್ಷೆಗಾಗಿ 750 ಎಂಎಲ್‌ನ 5 ಸೀಸೆ, 375ನ 1 ಸೀಸೆ ಮತ್ತು 180 ಎಂಎಲ್‌ನ 6 ಸೀಸೆಗಳನ್ನು ತೆಗೆದುಕೊಂಡು ಅವುಗಳ ಮುಚ್ಚಳಕ್ಕೆ ಬಟ್ಟೆ ದಾರ ಸುತ್ತಿ ಇಲಾಖಾ ಸೀಲಿನಿಂದ ಸೀಲು ಮಾಡಿ, ಸೀಲಿನ ಮಾದರಿ ತಯಾರಿಸಿ ಪಂಚರ ಸಹಿ ಪಡೆಯಲಾಯಿತು. ಪಂಚರ ಸಹಿ ಪಡೆದ ಚೀಟಿಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದುಕೊಂಡ ಸೀಸೆಗಳ ಮೇಲೆ ಅಂಟಿಸಲಾಯಿತು. ನಂತರ ಚಾಲಕ ಹಾಗೂ ಸಹಾಯಕನ ಹೆಸರು ಮತ್ತು ವಿಳಾಸವನ್ನು ಪಡೆದುಕೊಂಡು ಮಹಜರು ಮುಗಿಸಲಾಯಿತು. ಆರೋಪಿಯನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮದ್ಯ ಹಾಗೂ ಸಾಗಾಣಿಕೆಗೆ ಬಳಸಿದ ವಾಹನವನ್ನು ವಶಪಡಿಸಿಕೊಂಡು, ಆರೋಪಿಯ ವಿರುದ್ಧ ಮೊಕದ್ದಮೆ ದಾಖಲಿಸಿರುತ್ತಾರೆ. ವಾಹನವನ್ನು ತಪಾಸಣೆ ಮಾಡುವ ಮೊದಲು ಸಂಬಂಧಿಸಿದ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದ ಕಾರಣಗಳನ್ನು ನಮೂದಿಸಿ ಒಂದು ಮೆಮೊವನ್ನು ಸ್ಥಳದಲ್ಲಿಯೇ ತಯಾರಿಸಿದರು. ಮೊಮೋದ ಛಾಯಪ್ರತಿಯನ್ನು ನಿಶಾನೆ ಪಿ-1 ಎಂದು ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ-1ಎ ಎಂದು, ಮಹಜರನ್ನು ನಿಶಾನೆ ಪಿ-2 ಎಂದು ತನ್ನ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಯಿತು. ಮುಂದಿನ ಸೂಕ್ತ ಕ್ರಮಕ್ಕಾಗಿ ಬಂಟ್ವಾಳ ವಲಯರವರಿಗೆ ಹಸ್ತಾಂತರಿಸಲಾಯಿತು. ಪ್ರಥಮ ಮಾಹಿತಿ ವರದಿಯ ಛಾಯ ಪ್ರತಿಯನ್ನು ನಿಶಾನೆ ಪಿ-3 ಎಂದು ಅದರಲ್ಲಿಯ ತನ್ನ ಸಹಿಯನ್ನು ನಿಶಾನೆ ಪಿ-3ಎ ಎಂದು ಗುರುತಿಸಲಾಯಿತು. ವಶಪಡಿಸಿದ ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ-4 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ-4ಎ ಎಂದು ಗುರುತಿಸಲಾಯಿತು. ಸದರಿ ದಿನಾಂಕದಂದು ಅರ್ಜಿದಾರರು ಗೈರುಹಾಜರಿದ್ದು ಪಾರ್ಟಿ ಸವಾಲು ಇಲ್ಲವೆಂದು ಈ ಪ್ರಾಧಿಕಾರವು ಪರಿಗಣಿಸಲಾಯಿತು.

**ಪ್ರಾ.ಸ-2:**

ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯರವರು ಪ್ರಕರಣದ ತನಿಖಾಧಿಕಾರಿಯಾಗಿದ್ದು ಇವರು ದಿನಾಂಕ: 18.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ನುಡಿದಿರುತ್ತಾರೆ. ಪ್ರಕರಣಕ್ಕೆ ಸಂಬಂಧಪಟ್ಟ ಸೊತ್ತುಗಳನ್ನು, ಮಾದರಿ ಸೀಸೆಗಳನ್ನು ಹಾಗೂ ದಾಖಲೆಗಳನ್ನು ಅಬಕಾರಿ ನಿರೀಕ್ಷಕರು, ಶ್ರೀ ಜ್ವಾಲಣ್ಣ, ಇಐಬಿ, ಮಂಗಳೂರು ವಿಭಾಗ, ಮಂಗಳೂರುರವರು ತನಗೆ ಹಸ್ತಾಂತರಿಸಿರುತ್ತಾರೆ. ದಿನಾಂಕ: 15.1.2001 ರಂದು ತಕ್ಷೀರಿಗೆ ಸಂಬಂಧಿಸಿದ 12 ಮಾದರಿ ಬಾಟ್ಲಿಗಳನ್ನು ಮಾದರಿ ಮೊಹರು ಹಾಗೂ ಕೋರಿಕೆ ಪತ್ರಗಳ ಜೊತೆಯಲ್ಲಿ ರಾಸಾಯನಿಕ ವಿಶ್ಲೇಷಕರು ಮಂಗಳೂರು ಇವರಿಗೆ ತನ್ನ ಕಛೇರಿಯ ಅಬಕಾರಿ ರಕ್ಷಕರಾದ ಶ್ರೀ ಸಿ. ಕೋಟಿ ಎಂಬುವರ ಮುಖಾಂತರ ಕಳುಹಿಸಿ ಕೊಟ್ಟಿರುತ್ತೇನೆ. ದಿನಾಂಕ: 9.2.2001 ರಂದು ತನಗೆ ರಾಸಾಯನಿಕ ತಜ್ಞರಿಂದ ವಿಶ್ಲೇಷಣಾ ವರದಿಯು ತಲುಪಿರುತ್ತದೆ. ವಶಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ದಿನಾಂಕ: 28.3.2001 ರಂದು ವರದಿ ಸಲ್ಲಿಸಿರುತ್ತೇನೆ. ಈ ಪ್ರಾಧಿಕಾರದ

ಆದೇಶ ಸಮ ಸಂಖ್ಯೆ: ದಿನಾಂಕ: 24.5.2001ರ ಪ್ರಕಾರ ಜಪ್ತು ಮಾಡಿದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತಾರೆ. ತಾನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಾಮರಾಜ ನಗರದಿಂದ ತಕ್ಷೀರಿನಲ್ಲಿ ಜಪ್ತು ಮಾಡಿದ ಲಾರಿ ಸಂಖ್ಯೆ: ಕೆಎ-10-1908ಕ್ಕೆ ಸಂಬಂಧಿಸಿ 'ಬಿ' ಅಬ್‌ಸ್ಟ್ರಾಕ್ ವಹಿಯನ್ನು ಪಡೆದುಕೊಂಡಿರುತ್ತೇನೆ. ವಾಹನ ನೋಂದಣಿ ಮಾಲೀಕ ಶ್ರೀ ಎಂ. ರಘುಪ್ರಕಾಶ್ ಎಂದು ತಿಳಿದು ಬರುತ್ತದೆ. ತಾನು ದಿನಾಂಕ: 31.5.2001 ರಂದು ಈ ಪ್ರಾಧಿಕಾರದ ಆದೇಶದ ಮೇರೆಗೆ ವಶಪಡಿಸಿಕೊಂಡ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀ ರಘುಪ್ರಕಾಶ್‌ರವರಿಗೆ ಬಿಡುಗಡೆ ಗೊಳಿಸಿರುತ್ತೇನೆ. ದಿನಾಂಕ: 6.12.2001 ರಂದು ಸದರಿ ಪ್ರಕರಣದ ದೋಷಾರೋಪಣ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ-5 ಎಂದು ಮತ್ತು ಮಾದರಿ ಮೊಹರನ್ನು ನಿಶಾನೆ ಪಿ-6 ಎಂದು ಗುರುತಿಸಲಾಯಿತು. ಸದರಿ ದಿನಾಂಕದಂದು ಅರ್ಜಿದಾರರು ಹಾಜರಿದ್ದು, ಯಾವುದೇ ಪಾಟೀಸವಾಲು ಇಲ್ಲವೆಂದು ತಿಳಿಸಿರುತ್ತಾರೆ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸ-3:**

ಶ್ರೀ ಜಗನ್ನಾಥ ನ್ಯಾಕ್, ಅಬಕಾರಿ ರಕ್ಷಕರವರು ಈ ಪ್ರಾಧಿಕಾರದ ಮುಂದೆ ದಿನಾಂಕ: 4.2.2004 ರಂದು ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ತಾನು ದಿನಾಂಕ: 1.5.2001 ರಂದು ಅಬಕಾರಿ ನಿರೀಕ್ಷಕರವರ ನಿರ್ದೇಶನದ ಮೇರೆಗೆ ಬಂಟ್ವಾಳ ಕಡೆಯಿಂದ ಬಂದ ಲಾರಿಯನ್ನು ನಿಲ್ಲಿಸಿದೆನು. ಚಾಲಕನಲ್ಲದೇ ಇನ್ನೊಬ್ಬ ವ್ಯಕ್ತಿ ಇದ್ದನು. ಸದರಿ ಚಾಲಕನಲ್ಲಿ ವಿಚಾರಿಸಿದಾಗ ಲಾರಿಯಲ್ಲಿ ಸಿಮೆಂಟ್‌ನಿಂದ ಮಾಡಲ್ಪಟ್ಟ ಇಟ್ಟಿಗೆಯೆಂದು ತಿಳಿಸಿರುತ್ತಾರೆ. ಈ ಬಗ್ಗೆ ದಾಖಲಾತಿಗಳನ್ನು ಹಾಜರುಪಡಿಸಿರುತ್ತಾನೆ. ಆ ಸಂದರ್ಭದಲ್ಲಿ ಮದ್ಯದ ವಾಸನೆ ಬಂದಿರುವುದರಿಂದ ಸಂಶಯಗೊಂಡು ಲಾರಿಯಲ್ಲಿದ್ದ ಸಿಮೆಂಟ್ ಇಟ್ಟಿಗೆಗಳನ್ನು ಬಿಡಿಸಿ ನೋಡಲಾಗಿ ಅಡಿಯಲ್ಲಿ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು, ಮದ್ಯವನ್ನು ಸಾಗಾಣಿಕೆ ಮಾಡಲು ರಹದಾರಿ ಪತ್ರ ಇದೆಯೇ ಎಂದು ಚಾಲಕನಲ್ಲಿ ಹಾಗೂ ಸಹಾಯಕನಲ್ಲಿ ವಿಚಾರಿಸಿದಾಗ ತನ್ನ ಬಳಿ ಯಾವುದೇ ರಹದಾರಿ ಪತ್ರ ಇಲ್ಲವೆಂದು ತಿಳಿಸಿರುತ್ತಾರೆ. ಆ ಸಮಯದಲ್ಲಿ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ, ಕಾರಣವನ್ನು ನಮೂದಿಸಿ ಸರ್ಚ್ ಮೆಮೋವನ್ನು ಸ್ಥಳದಲ್ಲಿಯೇ ತಯಾರಿಸಲಾಯಿತು. ಮಹಜರನ್ನು ಸ್ಥಳದಲ್ಲಿಯೇ ಬರೆದು ಆರೋಪಿಗಳನ್ನು ಹಾಗೂ ಮದ್ಯ ಮತ್ತು ವಾಹನವನ್ನು ವಶಪಡಿಸಿಕೊಂಡು ಆರೋಪಿಗಳ ವಿರುದ್ಧ ಮೊಕದ್ದಮೆ ದಾಖಲಿಸಲಾಯಿತು. ಸದರಿ ದಿನಾಂಕದಂದು ವಾಹನ ಮಾಲೀಕರು ಗೈರು ಹಾಜರಿದ್ದು, ಪಾರ್ಟಿಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಈ ಪ್ರಕರಣದಲ್ಲಿ ಪ್ರಾ.ಸಾ-1 ರಿಂದ ಪ್ರಾ.ಸಾ-3 ಪ್ರಕರಣಕ್ಕೆ ಪೂರಕವಾಗಿ ಸಾಕ್ಷಿ ನೀಡಿರುತ್ತಾರೆ. ಇವರು ನೀಡಿರುವ ಸಾಕ್ಷಿಗೆ ಅರ್ಜಿದಾರರು ಯಾವುದೇ ಪಾರ್ಟಿ ಸವಾಲು ಮಾಡಿರುವುದಿಲ್ಲ. ಇವರು ನೀಡಿರುವ ಹೇಳಿಕೆಯ ಮೇರೆಗೆ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 5.1.2001 ರಂದು ಪ್ರಕರಣದಲ್ಲಿ ಜಪ್ತು ಪಡಿಸಿರುವ ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಕೆಎಲ್-10-1908 ರಲ್ಲಿ ಅಕ್ರಮವಾಗಿ ಸಿಮೆಂಟ್ ಇಟ್ಟಿಗೆಗಳೊಂದಿಗೆ ಅಕ್ರಮವಾಗಿ ರಟ್ಟಿನ ಪೆಟ್ಟಿಗೆಗಳಲ್ಲಿ ಮದ್ಯ ತುಂಬಿದ ಬಾಟ್ಲಿಗಳನ್ನು ಸಾಗಾಣಿಕೆ ಮಾಡಲಾಗಿರುವುದು. ಸ್ಥಳದಲ್ಲಿ ಮದ್ಯವನ್ನು ಹಾಗೂ ವಾಹನವನ್ನು ವಶಪಡಿಸಿಕೊಂಡು ತಯಾರಿಸಿರುವ ಸ್ಥಳ ಮಹಜರು ಹಾಗೂ ಸಾಕ್ಷಿಗಳ ಹೇಳಿಕೆಯಿಂದ ಸಾಬೀತಾಗಿದ್ದು, ಅಕ್ರಮ ಸಾಗಾಣಿಕೆಯಲ್ಲಿ ವಶಪಡಿಸಿಕೊಳ್ಳಲಾಗಿರುವ ವಾಹನ ಸಂಖ್ಯೆ: ಕೆಎಲ್:10-1908ನ್ನು ಉಪಯೋಗಿಸಿರುವುದು ನಿಸ್ಸಂಶಯವಾಗಿ ಕಂಡು ಬರುತ್ತದೆ. ಆದುದರಿಂದ 1ನೇ ಅಂಶವನ್ನು ಗುಣಾತ್ಮಕ್ರವಾಗಿ ಪರಿಗಣಿಸಿರುತ್ತೇನೆ.

ಸದರಿ ಅಕ್ರಮ ಮದ್ಯ ಸಾಗಾಣಿಕೆಯು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆಯೆಂದು ಅಗತ್ಯ ಸಾಕ್ಷಾಧ್ಯಾರಗಳೊಂದಿಗೆ, ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ವಾಹನ ಮಾಲೀಕರಿಗೆ ಹಲವಾರು ಬಾರಿ ಈ ಪ್ರಾಧಿಕಾರವು ನೋಟೀಸು ನೀಡಿದರೂ ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಯಾವುದೇ ಸಾಕ್ಷಾಧ್ಯಾರಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ಸದರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆಯೆಂದು ಸಾಬೀತು ಪಡಿಸಿರುವುದಿಲ್ಲ. ಅಭಿಯೋಜನ ಪರ ಸಾಕ್ಷಿದಾರರಿಗೆ ಯಾವುದೇ ಪಾರ್ಟಿ ಸವಾಲು ಮಾಡಿರುವುದಿಲ್ಲ.

ಆದುದರಿಂದ ಅಕ್ರಮ ಮದ್ಯವನ್ನು ಸಿಮೆಂಟ್ ಇಟ್ಟಿಗೆಗಳ ಅಡಿಯಲ್ಲಿ ಸಾಗಾಣಿಕೆ ಮಾಡಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಕಾರಣಗಳಿಂದ ಎರಡನೇ ಅಂಶವನ್ನು ನಕರಾತ್ಮಕ್ರವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ, ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ನಿರ್ಧಾರಕ್ಕೆ ಒಂದು ಪ್ರಾಧಿಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿ ಆದೇಶಿಸಿದೆ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43(ಎ) ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ನಂ., ಇಐಬಿ, ಮಂಗಳೂರು ವಿಭಾಗ, ಮಂಗಳೂರುರವರ ಮೊಕದ್ದಮೆ ಸಂಕ್ಯೆ: 19/2000-01, ದಿನಾಂಕ: 5.01.2001 ರಂದು ಜಪ್ತುಪಡಿಸಿಕೊಂಡಿರುವ ಅಶೋಕ್ ಲೈಲ್ಯಾಂಡ್ ಲಾರಿ ಸಂಖ್ಯೆ: ಕೆಎಲ್-10-1908 ನ್ನು ನಿಯಮ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶ ಹೊರಡಿಸಿದ ದಿನಾಂಕ: 9.2.2005 ರಿಂದ ಒಂದು ತಿಂಗಳ ಅವಧಿ ಒಳಗೆ, ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನದ ಮಾಲೀಕರು, ವಾಹನ ಸಂಖ್ಯೆ: ಕೆಎಲ್-10-1908 ಅಶೋಕ್ ಲೈಲಾಂಡ್ ಲಾರಿಯನ್ನು ಈ ಪ್ರಾಧಿಕಾರಕ್ಕೆ ಒಪ್ಪಿಸಿದಿದ್ದಲ್ಲಿ, ಸದ್ರಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿರುವ ಸಂದರ್ಭದಲ್ಲಿ ಈ ಪ್ರಾಧಿಕಾರಕ್ಕೆ ಒಪ್ಪಿಸಲಾಗಿರುವ ಬ್ಯಾಂಕ್ ಭದ್ರತೆ ಮೊತ್ತ ರೂ.65,000/- ವನ್ನು ಸರ್ಕಾಕ್ಕೆ ಪಡೆಯಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 09.02.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ-1: - ಶ್ರೀ ಆರ್.ಜೆ. ಜ್ವಾಲಣ್ಣ, ಅಬಕಾರಿ ಉಪ ಅಧೀಕ್ಷಕರು, ಇಐಬಿ, ಮಂಗಳೂರು ವಿಭಾಗ, ಮಂಗಳೂರು.

ಪ್ರಾ.ಸಾ-2: - ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ.

ಪ್ರಾ.ಸಾ-3: - ಶ್ರೀ ಶ್ರೀ ಜಗನ್ನಾಥ ನಾಯ್ಕ್, ಅಬಕಾರಿ ರಕ್ಷಕ, ಇಐಬಿ, ಮಂಗಳೂರು ವಿಭಾಗ, ಮಂಗಳೂರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ಸ್ಥಳದಲ್ಲಿ ತಯಾರಿಸಿದ ಮೆಮೋದ ಛಾಯಾ ಪ್ರತಿ.

ನಿಶಾನೆ ಪಿ-1(ಎ) - ಅದರಲ್ಲಿರುವ ತನ್ನ ಸಹಿ.

ನಿಶಾನೆ ಪಿ-2 - ಮಹಜರ್‌ನ ಪ್ರತಿ.

ನಿಶಾನೆ ಪಿ-2(ಎ) - ಅದರಲ್ಲಿರುವ ತನ್ನ ಸಹಿ.

ನಿಶಾನೆ ಪಿ-3 - ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-3(ಎ) - ಅದರಲ್ಲಿರುವ ಸಹಿ.

ನಿಶಾನೆ ಪಿ-4 - ಕಲಂ 43ರ ವರದಿ.

ನಿಶಾನೆ ಪಿ-4(ಎ) - ಅದರಲ್ಲಿರುವ ಸಹಿ.

ನಿಶಾನೆ ಪಿ-5 - ಕೆಮಿಕಲ್ ವರದಿ.

ನಿಶಾನೆ ಪಿ-6 - ಮಾದರಿ ಮೊಹರು.

**ಅನುಬಂಧ-3**

ವಾಹನದಲ್ಲಿದ್ದ ಇತರ ಸೊತ್ತುಗಳ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು - ಇಲ್ಲ -

**ಅನುಬಂಧ-4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲ -

**ಎನ್.ಎಂ. ಹುಸೇನ್**

ಪಿ.ಆರ್. 462 ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಇವರ ನಡವಳಿಕೆಗಳು**

**ಸಂಖ್ಯೆ: ಸನಿವ/ಯಾ.ಸ್ಥಿರೀಕರಣ/538/2004-05, ದಿನಾಂಕ: 21ನೇ ಫೆಬ್ರವರಿ 2005**

**ವಿಷಯ:** ಶ್ರೀ ಎಸ್. ಸಿದ್ದೇಗೌಡ ಬಿನ್ ಸಿದ್ದೇಗೌಡ, ಪ್ರೋ: ನರಸಿಂಹ ಸಿಲ್ಕ್ ಫಿಲೇಚರ್, ಕಣ್ಣೂರು ಗ್ರಾಮ, ಕೊಳ್ಳೇಗಾಲ ತಾ. ಚಾಮರಾಜನಗರ ಜಿಲ್ಲೆ, ಮತ್ತು ಇತರರು ಸಿ.ಇ.ಪಿ. ನಂ.35/1988-89ರ, ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ:** ಮಾರಾಟಾಧಿಕಾರಿ, ಮೈಸೂರು ಶಾಖೆ ಇವರ ಪತ್ರ ಕ್ರ.ಸಂ: ಕೆಆರ್‌ಕೆ ಎಸ್‌ಬಿ/ವೈಎಸ್/2004-05, ದಿನಾಂಕ: 17.1.2005.

**ಪ್ರಸ್ತಾವನೆ:**

ಶ್ರೀ ಎಸ್. ಸಿದ್ದೇಗೌಡ ಬಿನ್ ಸಿದ್ದೇಗೌಡ, ಪ್ರೋ: ನರಸಿಂಹ ಸಿಲ್ಕ್ ಫಿಲೇಚರ್, ಕಣ್ಣೂರು ಗ್ರಾಮ, ಕೊಳ್ಳೇಗಾಲ ತಾ. ಚಾಮರಾಜನಗರ ಜಿಲ್ಲೆ, ಮತ್ತು ಇತರರು, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಮೈಸೂರು ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ: 16.01.1988 ರಂದು ಅವಾರ್ಡ್ ನಂ: ಆರ್‌ಸಿಎಸ್.ಡಿಆರ್‌ಡಿ/1019/ 1983-84 ರೀತ್ಯ ಡಿಕ್ರಿ ಪಡೆದಿರುತ್ತಾರೆ. ಡಿಕ್ರಿಯಾದ ನಂತರವು ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಅಮಲ್ಜಾರಿ ಆದೇಶ ಸಂಖ್ಯೆ: ಸಿ.ಇ.ಪಿ. ನಂ.35/1988-89 ರಂತೆ ಪಡೆದು ಅಮಲ್ಜಾರಿ ಕಡತವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳಡಿಯಲ್ಲಿ ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸುಸ್ತಿದಾರರಿಗೆ ಸೇರಿದ ಕೆಳಕಂಡ ಆದೇಶದಡಿಯಲ್ಲಿ ತಿಳಿಸಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 27.11.2004 ರಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು ಅಂದು ನಡೆದ ಹರಾಜಿನಲ್ಲಿ ಭಾಗವಹಿಸಿದವರ ಪೈಕಿ ಶ್ರೀ ಶಿವಲಿಂಗಸ್ವಾಮಿ ಬಿನ್ ಸಿದ್ದಯ್ಯ, ಮನೆ ನಂ.84, 22ನೇ ಮುಖ್ಯರಸ್ತೆ, ಸುಬ್ಬಣ್ಣ ಗಾರ್ಡನ್, ವಿಜಯನಗರ, ಬೆಂಗಳೂರು-560040, ಇವರು ಅತಿ ಹೆಚ್ಚಿನ ಮೊತ್ತ ರೂ.45,000/-ಕ್ಕೆ (ನಲವತ್ತೈದು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು, ಮೈಸೂರು ಶಾಖೆ ಬಿಡ್‌ನ್ನು ಶ್ರೀ ಶಿವಲಿಂಗಸ್ವಾಮಿ ಬಿನ್ ಸಿದ್ದಯ್ಯ, ರವರ ಹೆಸರಿಗೆ ನಿಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 196 ರನ್ವಯ ನಿಯಮ 38(2) (ಡಿ)ರ ಪ್ರಕಾರ ಕ್ರಮ ಜರುಗಿಸಲಾಗಿದ್ದು, ನಿಯಮ 38(6)(ಎ) ಅನ್ವಯ ಕ್ರಮ ತೆಗೆದುಕೊಳ್ಳಬೇಕಾಗಿರುವುದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀ ಎಸ್. ಸಿದ್ದೇಗೌಡ ಬಿನ್ ಸಿದ್ದೇಗೌಡ, ಪ್ರೋ: ನರಸಿಂಹ ಸಿಲ್ಕ್ ಫಿಲೇಚರ್, ಕಣ್ಣೂರು ಗ್ರಾಮ, ಕೊಳ್ಳೇಗಾಲ ತಾ. ಚಾಮರಾಜನಗರ ಜಿಲ್ಲೆ, ಮತ್ತು ಇತರರು, ಇವರುಗಳಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 27.11.2004ರ ಬಹಿರಂಗ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್

ಮೊತ್ತ ರೂ.45.000/- (ನಲವತ್ತೈದು ಸಾವಿರ ರೂಪಾಯಿಗಳು ಮಾತ್ರ) ಕ್ಕೆ ಬಿಡ್ ಮಾಡಿದ್ದ ಶ್ರೀ ಶಿವಲಿಂಗಸ್ವಾಮಿ ಬಿನ್ ಸಿದ್ದಯ್ಯ, ಮನೆ ನಂ.84, 22ನೇ ಮುಖ್ಯರಸ್ತೆ, ಸುಬ್ಬಣ್ಣ ಗಾರ್ಡನ್, ವಿಜಯನಗರ, ಬೆಂಗಳೂರು-560040, ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಚಾಮರಾಜನಗರ ಜಿಲ್ಲೆ, ಕೊಳ್ಳೇಗಾಲ ತಾಲ್ಲೂಕು, ಕಣ್ಣೂರು ಗ್ರಾಮ, ಸರ್ವೆ ನಂ.226, ವಿಸ್ತೀರ್ಣ 2 ಎಕರೆ 22 1/2 ಗುಂಟೆ ಜಮೀನು,

**ಚೆಕ್ಕುಬಂದಿ:**

ಪೂರ್ವಕ್ಕೆ : ಶ್ರೀ ಶಿವಣ್ಣನವರ ಜಮೀನು

ಪಶ್ಚಿಮಕ್ಕೆ : ಶ್ರೀ ಇರಪ್ಪ ದೇವರು @ ಮಹಾಂತ ದೇವರ ಜಮೀನು

ಉತ್ತರಕ್ಕೆ : ಬಂಡಿ ರಸ್ತೆ

ದಕ್ಷಿಣಕ್ಕೆ : ಶ್ರೀ ಶಿವಬಸಪ್ಪ ನವರ ಜಮೀನು

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 21.02.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,

ಪಿ.ಆರ್. 463 ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ ಸಾಗರ ಇವರ ನ್ಯಾಯಾಲಯ, ಸಾಗರ**

**ಅಧಿಸೂಚನೆ ಸಂಖ್ಯೆ: ಬಿ3.ಅಮೊ.ವಾಹನ.16/2004-05, ದಿನಾಂಕ: 26ನೇ ಫೆಬ್ರವರಿ 2005**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಮಾರುತಿ ವ್ಯಾನ್, ಕೆಎ-25-ಎಂ-7435 | ಸಅಸಂ. (ಅ.ಸಂ.) ಶಿಕಾರಿಪುರ ಅ.ಮೊ. ನಂ.80/2004-05 | 527843 | 845323 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರು ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಕೆಳ ಸಹಿ ಮಾಡಿರುವವರ ಸಮ್ಮುಖದಲ್ಲಿ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನಗಳನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆಗೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 464 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಳಿಯಾಳ, ಹಳಿಯಾಳ ವಿಭಾಗ, ಹಳಿಯಾಳ ಇವರ ನ್ಯಾಯಾಲಯ**

**ಪ್ರಕಟಣೆ ಸಂಖ್ಯೆ: ಅರಣ್ಯ/ಗುನ್ನೆ/ವಾಹನ/ಮುಟ್ಟುಗೋಲು/2004-05, ಹಳಿಯಾಳ, ದಿನಾಂಕ: ಮಾರ್ಚ್ 2005**

ಹಳಿಯಾಳ ವಿಭಾಗದಲ್ಲಿ ಅನಧೀಕೃತವಾಗಿ ಮರಮಟ್ಟುಗಳ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಸಮಯದಲ್ಲಿ ಗುನ್ನೆಯಲ್ಲಿ ಒಳಗೊಂಡ ಈ ಕೆಳಗಿನ ವಾಹನವನ್ನು ಜಪ್ತಿಮಾಡಿ ಕರ್ನಾಟಕ ಅರಣ್ಯ ಕಾಯ್ದೆ 1962 ಸೆಕ್ಷನ್ 71ಎದ ಮೇರೆಗೆ ವಿಚಾರಣೆ ನಡೆಯಿಸುವ ಕುರಿತು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ವಾಹನ ಮಾಲೀಕರ ಮಾಲಿಕತ್ವದ ವಿವರಣೆಯನ್ನು ಕೇಳಲಾಗಿತ್ತು. ಇದೂವರೆಗೂ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಮಾಹಿತಿ ಸ್ವೀಕೃತವಾಗಿದ್ದು ಇರುವುದಿಲ್ಲಾ. ಆದ್ದರಿಂದ ವಾಹನ ಮಾಲೀಕರ ವಿಳಾಸ ಪಡೆಯಲು ಹಾಗೂ ಸದರ ವಾಹನ ಅರಣ್ಯ ಗುನ್ನೆಯಲ್ಲಿ ಭಾಗಿಯಾಗಿಲ್ಲವೆಂದು ಸಾಕ್ಷಾಧಾರಗಳ ಸಮೇತ ರುಜುವಾತು ಪಡಿಸಲು ಈ ಪ್ರಕಟಣೆಯನ್ನು ಹೊರಡಿಸಲು ಉದ್ದೇಶಿಸಿದೆ.

ಕಾರಣ ಈ ಕೆಳಗೆ ನಮೂದಿಸಿದ ವಾಹನಗಳಿಗೆ ಸಂಬಂಧಿಸಿದ ಮಾಲೀಕರು ತಮ್ಮ ಹಕ್ಕು ಬಾಧ್ಯತೆ ಸಾಧಿಸಲು ಅಧೀಕೃತ ದಾಖಲೆ ಮತ್ತು ಸಾಕ್ಷ್ಯಾಧಾರಗಳನ್ನು ಈ ಪ್ರಕಟಣೆಯು ಅಧೀಕ್ರತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 30 ದಿವಸಗಳೊಳಗೆ ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಸದರಿ ಜಪ್ತಿಪಡಿಸಿಕೊಳ್ಳಲಾದ ವಾಹನಗಳನ್ನು ಕರ್ನಾಟಕ ಅರಣ್ಯ ನಿಯಮ 1963 ಸೆಕ್ಷನ್ 71(ಎ)ನೇದರಂತೆ ವಾಹನ ಹಾಗೂ ಅದರಲ್ಲಿದ್ದ ಅರಣ್ಯ ಉತ್ಪನ್ನ ಮತ್ತು ಇನ್ನಿತರ ವಾಹನದಲ್ಲಿದ್ದ ಇತರೇ ಸಾಮಗ್ರಿ ಹಾಗೂ 2 ಸಂಖ್ಯೆ ಮೊಬೈಲ್ ಸೆಟ್ ಇವುಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಅ.ನಂ. | ವಾಹನ ವಿವರ | ವಶಪಡಿಸಿಕೊಂಡ ಅರಣ್ಯ ಉತ್ಪನ್ನ | ಛಾಸ್ಸಿ ನಂ. | ಇಂಜಿನ್ ನಂ. |
|---|---|---|---|---|
| 1 | ಮಾರುತಿ ಎಸ್ಟೀಮ್ ಕಾರು ಕೆಎ-26/ಎಂ-807 | ಸಾಗ 18=3.793 ಘ.ಮೀ. | ಎಂಎ3ಇಬಿಇ41500 215484 | 579258 ಎಫ್‌ವಿ |
| 2 | ಟಾಟಾ ಎಲ್‌ಪಿ ಲಾರಿ ನಂ. ಸಿಎನ್‌ಎಕ್ಸ್-6187 | ಸಿಸಂ 6=0.323 ಘ.ಮೀ. | 344052167816 | 692002175631 |
| 3 | ಮೋಬೈಲ್ ಸೆಟ್ 2 ನಂ | - | - | - |

ಪಿ.ಆರ್. 465 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ.

**ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯ, ಶಿಡ್ಲಘಟ್ಟ**

**ಪ್ರಕಟಣೆ ಸಂಖ್ಯೆ: ನಿಯಮ 457(2) ದಂಡ ಪ್ರಕ್ರಿಯಾ ಸಂಹಿತೆ, ದಿನಾಂಕ: 28ನೇ ಫೆಬ್ರವರಿ 2005**

ಶಿಡ್ಲಘಟ್ಟ ಗ್ರಾಮಾಂತರ ಆರಕ್ಷಕ ಉಪನಿರೀಕ್ಷಕರು, ಠಾಣಾ ಮೊಕದ್ದಮೆ ಸಂಖ್ಯೆ: ಸಿ.ಮಿಸ್.8/98 ಪಿ.ಎಫ್.ಎಫ್.92/92 ಮತ್ತು ಸಿ.ಮಿಸ್.23/98 ಶಿಡ್ಲಘಟ್ಟ ಗ್ರಾ. ಪೊಲೀಸರು ವಶಪಡಿಸಿಕೊಂಡ ಸ್ವತ್ತುಗಳಿಗೆ ವಾರಸುದಾರರು ಇಲ್ಲದೆ ವಿಲೇವಾರಿಯಾಗದೆ ಉಳಿದಿದೆ. ಆ ಬಗ್ಗೆ ಕರ್ನಾಟಕ ಸರ್ಕಾರ ಪ್ರಕಟಣೆಯನ್ನು ಹೊರಡಿಸಿದ್ದು ಈ ಪ್ರಕಟಣೆಯ ಒಂದು (1) ತಿಂಗಳ ಒಳಗಾಗಿ ಸದರಿ ಸ್ವತ್ತುಗಳನ್ನು ಸಂಬಂಧಪಟ್ಟವರು ನ್ಯಾಯಾಲಯದಿಂದ ಪಡೆದುಕೊಳ್ಳದಿದ್ದಲ್ಲಿ ಸದರಿ ಈ ಕೆಳಗೆ ಕಾಣಿಸಿದ ವಾರಸುದಾರರು ಇಲ್ಲದ ಸ್ವತ್ತುಗಳನ್ನು ಕಾನೂನು ಪ್ರಕಾರ ವಿಲೇವಾರಿ ಮಾಡಲಾಗುವುದು.

| ಮೊ.ಸ. | ಪಿ.ಎಫ್. ಸಂಖ್ಯೆ | ಪಿ.ಆರ್. ಸಂಖ್ಯೆ | ಸ್ವತ್ತುಗಳ ವಿವರ |
|---|---|---|---|
| 1 | ಸಿ.ಮಿಸ್. 8/98 92/98 | ಒಂದು ಹಳೆಯ ಯಜ್ಡಿ ಮೋಟಾರ್ ಸೈಕಲ್ ಇಂಜಿನ್ ನಂ. 00-ಸಿ12-250 | |
| 2 | ಸಿ.ಮಿಸ್. 23/98 117/98 | ಒಂದು ಹಳೆಯ ಹೀರೋ ಜೆಟ್ ಸೈಕಲ್ ನಂ. 1998ಜೆಡ್ | |

ಪಿ.ಆರ್. 466 ಪ್ರಧಾನ ಸಿವಿಲ್ ನ್ಯಾಯಾಧೀಶರು (ಕಿ.ವಿ.) ಮತ್ತು ಜೆಎಂಎಫ್‌ಸಿ, ಶಿಡ್ಲಘಟ್ಟ.

**ಮಾನ್ಯ 1ನೇ ಸಂಚಾರಿ ನ್ಯಾಯಾಲಯದ ನ್ಯಾಯಾಧೀಶರ ಸನ್ನದಿಗೆ ಮೇಯೋ ಹಾಲ್, ಬೆಂಗಳೂರು ನಗರ**

**ವಿಷಯ:** ವಾರಸುದಾರರಿಲ್ಲದಿರುವ ವಾಹನಗಳ ಮಾಲೀಕರುಗಳನ್ನು ಪತ್ತೆ ಮಾಡಲು ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಸೂಚನೆ ಹೊರಡಿಸಲು ಕೋರಿ.

**ಉಲ್ಲೇಖ:** ಇಂದಿರಾನಗರ ಪೊಲೀಸ್ ಠಾಣೆ ಸೀಮಿಸ್ ನಂ. (1) ಸೀಮಿಸ್ ನಂ.102/04, (2) ಸೀಮಿಸ್ ನಂ.02/05 (3) ಸೀಮಿಸ್ ನಂ.06/05

**ನಿವೇಧನೆ:**

ಈ ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಪಟ್ಟಂತೆ ಘನ ನ್ಯಾಯಾಲಯದಲ್ಲಿ ನಿವೇಧಿಸಿಕೊಳ್ಳುವುದೇನೆಂದರೆ ಇಂದಿರಾನಗರ ಪೊಲೀಸ್ ಠಾಣೆಯ ಸರಹದ್ದಿನಲ್ಲಿ ವಾರಸುದಾರರಿಲ್ಲದ ವಾಹನಗಳ ಮಾಲೀಕರನ್ನು ಪತ್ತೆ ಮಾಡಲು ಈ ಮೇಲ್ಕಂಡ ಕೇಸುಗಳಲ್ಲಿ ನ್ಯಾಯಾಲಯದಿಂದ ಅನುಮತಿ ಪಡೆದು ಅಮಾನತುಪಡಿಸಿಕೊಂಡಿದ್ದು ವಾರಸುದಾರರನ್ನು ಪತ್ತೆ ಮಾಡಲು ಈ ಕೆಳಕಂಡ ವಾಹನಗಳು ನೋಂದಣಿಯಾಗಿರುವ ಪ್ರಾದೇಶಿಕ ಸಾರಿಗೆ ಕಛೇರಿಗಳಾಗಿರುವ ಕೇಂದ್ರ, ಉತ್ತರ, ಪೂರ್ವ, ಪಶ್ಚಿಮ, ಮತ್ತು ದಕ್ಷಿಣ ವಲಯಗಳಲ್ಲಿ ಹಾಗೂ ಕೇಂದ್ರ ಅಪರಾಧ ದಾಖಲೆ ವಿಭಾಗ ಮತ್ತು ರಾಜ್ಯ ಅಪರಾಧ ವಿಭಾಗಗಳಲ್ಲಿ ಪರಿಶೀಲನೆ ಮಾಡಲಾಗಿ ಯಾವುದೇ ವಾಹನದ ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ಕೆಳಕಂಡಂತೆ ಕ್ರಮಕೈಗೊಂಡಿರುತ್ತೆ.

(1) ಫೋರ್ಡ್ ಐಕಾನ್ ಕಾರ್ ನಂ. ಎಂ.ಹೆಚ್. 06 ಟಿ 7530 ಚಾರ್ಸಿ ನಂ.3ಡಿ 53740, ಇಂಜಿನ್ ನಂ. ಐಎನ್2ಜೆ6090 ಈ ವಾಹನವು ಮಹಾರಾಷ್ಟ್ರ ರಾಜ್ಯದಲ್ಲಿ ನೋಂದಣಿಯಾಗಿದ್ದು ಇದರ ಡೀಲರ್ ವಾಸನ್ ಆಟೋ ಸೇಲ್ಸ್ ಪ್ರೈವೇಟ್ ಲಿಮಿಟೆಡ್ ವಾಸನ್ ಹೌಸ್ ನಂ.162, ಸೀಂಧಿ ಸೊಸೈಟಿ, ಛತ್ರಪತಿ ಶಿವಾಜಿ ಟರ್ಮಿನಸ್ ಹೌಸ್ ರೋಡ್, ಛಂಬೂರ್, ಮುಂಬೈ-400071. ಈ ಡೀಲರ್‌ಗೆ ಸೇರಿದ್ದು ಅವರನ್ನು ದೂರವಾಣಿ ಮುಖಾಂತರ ವಿಚಾರಣೆ ಮಾಡಲಾಗಿ ಸದರಿಯವರು ಕಾರನ್ನು ರಿಲಯನ್ಸ್ ಇನ್ಫೋ ಕಂ. ಲಿಮಿಟೆಡ್‌ಗೆ ಮಾರಿದ್ದು ಅಲ್ಲಿನ ವಿಳಾಸವನ್ನು ನೀಡಿದ್ದು ಸದರಿ ವಿಳಾಸವು (1) ರಿಲಯನ್ಸ್ ಇನ್ಫೋ ಕಂ. ಲಿಮಿಟೆಡ್, ನಂ.302, ಹಾರ್ಬರ್ ಕೋರ್ಟ್ ಮುಂಬೈ, (2) ಪ್ಲಾಟ್ ನಂ.49/3 ಸೆಕ್ಟರ್ ಜವಹರ್ ಹೌಸಿಂಗ್ ಸೊಸೈಟಿ ನೆರುಲ್ ನವಿ ಮುಂಬೈ-400706 ರವರಿಗೆ ಪತ್ರ ಮುಖೇನ ಮತ್ತು ದೂರವಾಣಿ ಮೂಲಕ ವಿಚಾರ ಮಾಡಲಾಗಿ ಅವರು ಸರಿಯಾದ ಮಾಹಿತಿ ನೀಡಿರುವುದಿಲ್ಲ. ಈ ಕಾರಿನ ಬಗ್ಗೆ ಮುಂಬೈ ಪೊಲೀಸ್ ಆಯುಕ್ತರು (ಅಪರಾಧ) ಇವರಿಗೆ ಹಾಗೂ ಪೊಲೀಸ್ ಆಯುಕ್ತರು (ಕಂಪ್ಯೂಟರ್) ಇವರಿಗೆ ಪತ್ರ ಮುಖೇನ ವಿಷಯ ತಿಳಿಸಿದ್ದು ಅಲ್ಲಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲ. ಪ್ರಯತ್ನ ಜಾರಿಯಲ್ಲಿದೆ.

(2) ಸಿಕೆಎಸ್ 1755, ಹೀರೋ ಹೊಂಡಾ ಈ ವಾಹನದ ನಂ. ಯಮಹಾ ಕಂಪನಿಯ ಗಾಡಿಗೆ ಸೇರಿದ್ದು ಬಸವನಗುಡಿ ಪೊಲೀಸ್ ಠಾಣೆಯ ಕ್ರೈಂ ನಂ.88/95 ಕಲಂ 379, ಐ.ಪಿ.ಸಿ. ಪ್ರಕಾರ ಕೇಸು ದಾಖಲಾಗಿದ್ದು ಸದರಿ ಕೇಸು ಈಗ ಖುಲಾಸೆಯಾಗಿರುತ್ತೆ. ಈ ಯಮಹಾ ಗಾಡಿಯ ನಂಬರನ್ನು ಹೀರೋ ಹೋಂಡಾ, ಸಿಕೆಎಸ್-1755ಗೆ ಅಳವಡಿಸಿಕೊಂಡಿರುತ್ತಾರೆ. ಇದು ಯಾವುದೇ ಸಾರಿಗೆ ಕಛೇರಿಯಲ್ಲಿ ನೋಂದಣಿಯಾಗಿರುವುದಿಲ್ಲ.

(3) ಸ್ಕೂಟರ್ ಎಇವಿ-4778,

(4) ಸ್ಕೂಟರ್ ಸಿಕೆಪಿ-3682

(5) ರಾಯಲ್ ಎನ್‌ಫೀಲ್ಡ್ ಎಂ.ಇ.ಕೆ.-6248 ಛಾಸ್ಸಿ ನಂ.2ಬಿ2557ಹೆಚ್, ಇಂಜಿನ್ ನಂ. 255937,

(6) ಹೀರೋ ಪುಕ್ ಕೆಎಂ-2-ಹೆಚ್-7260, ಛಾಸ್ಸಿ ನಂ.ಸಿ.ಬಿ.0529, ಇಂಜಿನ್ ನಂ. ಬಿ03350

(7) ಎಲ್‌ಎಂ. ಎಲ್ ವೆಸ್ಪ ಕೆಎ-20-ಇ-1997 ಛಾಸ್ಸಿ ನಂ.ಹೆಚ್667855

(8) ಸ್ಕೂಟರ್ ಎಂ.ಇ.ಎ. 8000

(9) ಸುಜಿಕಿ ಪಿಯರೋ ---- ಛಾಸ್ಸಿ ನಂ. ಎಂ.1106ಎಫ್078914, ಇಂಜಿನ್ ನಂ.1470ಎಂ3

ಈ ಮೇಲ್ಕಂಡ ವಾಹನಗಳನ್ನು ಪತ್ತೆ ಮಾಡುವ ಸಲುವಾಗಿ ಪ್ರದೇಶಿಕ ಸಾರಿಗೆ ಕಛೇರಿಗಳಾದ ಇಂದಿರಾನಗರ, ಕೋರಮಂಗಲ, ರಾಜಾಜಿನಗರ, ಯಶವಂತಪುರ, ಮತ್ತು ಜಯನಗರ ಸಾರಿಗೆ ಕಛೇರಿಗಳಲ್ಲಿ ವಿಚಾರ ಮಾಡಲಾಗಿ ಯಾವುದೇ ವಿಧವಾದ ದಾಖಲಾತಿ ದೊರೆತಿರುವುದಿಲ್ಲ. ಆದ್ದರಿಂದ ಈವಾಗ ತಮ್ಮಲ್ಲಿ ನಿವೇದಿಸಿಕೊಳ್ಳುವುದೇನೆಂದರೆ ಈ ಮೇಲ್ಕಂಡ ವಾಹನಗಳ ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ನಮ್ಮ ರಾಜ್ಯ ಪತ್ರದಲ್ಲಿ ಪ್ರಚಾರ ಮಾಡಲು ಅನುಮತಿ ನೀಡಬೇಕೆಂದು ತಮ್ಮಲ್ಲಿ ನಿವೇಧಿಸಿಕೊಂಡಿರುತ್ತದೆ.

ಪಿ.ಆರ್. 467 ಪೊಲೀಸ್ ಇನ್ಸ್‌ಪೆಕ್ಟರ್‌ರವರು, ಇಂದಿರಾನಗರ ಪೊಲೀಸ್ ಠಾಣೆ, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ ಸಂಖ್ಯೆ: ಎಲ್ಆರ್ಎಫ್ (ಕಲಂ 109) ಸಿಆರ್ 12:2004-05, ದಿನಾಂಕ: 4ನೇ ಮಾರ್ಚ್ 2005

ಕೋಲಾರ ತಾಲ್ಲೂಕು, ಹುತ್ತೂರು ಹೋಬಳಿ, ಭಟ್ರಹಳ್ಳಿ ಗ್ರಾಮದ ಸ.ನಂ.05 ರಲ್ಲಿ 0-31 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಡಿ.ಎಡ್ ಕಾಲೇಜ್ ಸ್ಥಾಪನೆಗಾಗಿ) ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ಕಾರ್ಯದರ್ಶಿ ಶ್ರೀ ಚೌಡೇಶ್ವರಿ ಎಜುಕೇಷನಲ್ ಟ್ರಸ್ಟ್ ಭಟ್ರಹಳ್ಳಿ ಕೋಲಾರ ತಾಲ್ಲೂಕು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸಿರುವ ಸಂಬಂಧ ಕೋಲಾರ ತಾಲ್ಲೂಕು ತಹಶೀಲ್ದಾರ್ ರವರ ಪತ್ರದ ಸಂಖ್ಯೆ: ಎಲ್ಆರ್ಎಫ್:ಸಿಆರ್:111/2004-05 ದಿನಾಂಕ: 24.12.2004 ರಂತೆ ಕಡತ ತಯಾರಿಸಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಸದರಿ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್, ಕೋಲಾರ ಉಪವಿಭಾಗ, ರವರು ಪರಿಶೀಲಿಸಿ ಪತ್ರ ಸಂಖ್ಯೆ: ಎಲ್ಆರ್ಎಫ್:ಸಿಆರ್ 20:2004-05, ದಿನಾಂಕ: 10.01.2005 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನುಗಳನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ದಾನಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಭಟ್ರವಳ್ಳಿ ಗ್ರಾಮದ ಸ.ನಂ.5ರ ವಿಸ್ತೀರ್ಣ 0-31 ಗುಂಟೆ ಜಮೀನಿನ ಖಾತೆ ಭಟ್ರಹಳ್ಳಿ ಗ್ರಾಮದ ಶ್ರೀ ಬಿ.ವಿ. ಅಶೋಕ್ ಬಿನ್ ಕೆ.ಆರ್. ವೆಂಕಟೇಶಯ್ಯ ಎಂಬುವವರ ಹೆಸರಿನಲ್ಲಿರುತ್ತೆ. ಸದರಿ ಜಮೀನನ್ನು ಸದರಿಯವರು ಅರ್ಜಿದಾರರಿಗೆ ದಾನವಾಗಿ ನೀಡಲು ಒಪ್ಪಿ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನು ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ಕಾಯ್ದೆ/ನಿಯಮಗಳು:ಇನಾಂ ರದ್ದಿಯಾತಿ ಕಾಯ್ದೆ ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನಿನ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಮೇಲ್ಕಂಡ ಟ್ರಸ್ಟ್ ಉಪ ನೋಂದಣಾಧಿಕಾರಿಗಳು ಕೋಲಾರ ರವರ ಕಛೇರಿಯಲ್ಲಿ ನಂ.14/92-93 ದಿನಾಂಕ: 7.8.92 ರಂತೆ ನೋಂದಾವಣೆಯಾಗಿರುತ್ತೆ. ಸರ್ಕಾರಿ ಆದೇಶ ಸಂಖ್ಯೆ: ಇಡಿ 154 ಪಿಟಿಐ 2003 (357) ಬೆಂಗಳೂರು ದಿನಾಂಕ: 29.10.2003 ರಂತೆ ಶಿಕ್ಷಕರ ತರಬೇತಿ ಕೇಂದ್ರವನ್ನು (ಡಿ.ಎಡ್. ಕಾಲೇಜ್) ಸ್ಥಾಪಿಸಲು ಮೇಲ್ಕಂಡ ಟ್ರಸ್ಟ್‌ಗೆ ನಿರಾಕ್ಷೇಪಣಾ ಪತ್ರವನ್ನು (NOC) ನೀಡಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (ii) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ದಾನವಾಗಿ ಪಡೆಯಲು ಅನುಮತಿ/ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧರಣೆ ಕಾಯ್ದೆ 1961ರ ಕಲಂ 109 (1) (II)ಕ್ಕೆ ಅನುಗುಣವಾಗಿರುವುದರಿಂದ ಕೋಲಾರ ತಾಲ್ಲೂಕು ಹುತ್ತೂರು ಹೋಬಳಿ ಭಟ್ರಹಳ್ಳಿ ಗ್ರಾಮದ ಸ.ನಂ.5 ರಲ್ಲಿ 0-31 ಗುಂಟೆ (ಮೂವತ್ತೊಂದು ಗುಂಟೆ) ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಡಿಎಡ್ ಕಾಲೇಜು ಸ್ಥಾಪನೆಗಾಗಿ) ದಾನವಾಗಿ ಪಡೆಯಲು ಕಾರ್ಯದರ್ಶಿಗಳು ಶ್ರೀ ಚೌಡೇಶ್ವರಿ ಎಜುಕೇಷನಲ್ ಟ್ರಸ್ಟ್ ಭಟ್ರಹಳ್ಳಿ ಕೋಲಾರ ತಾಲ್ಲೂಕು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79ಎ, 79ಬಿ ಮತ್ತು 80 ಗಳಿಗೆ ವಿನಾಯ್ತಿಯನ್ನು ನೀಡಿ ಮೇಲ್ಕಂಡ ಜಮೀನನ್ನು ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (II) ರಂತೆ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಫ್ ಷೇರ್ ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ : ಓ.ಡಿ.ಪಿ. ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂಧರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (I) (II) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
7. ಸದರಿ ಜಮೀನಿನ ದಕ್ಷಿಣಕ್ಕೆ ಕೋಲಾರ ಬೇತಮಂಗಲ ರಸ್ತೆ ಇರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.
8. National Council for Teacher Education (NCTE) ಬೆಂಗಳೂರು ರವರಿಂದ ಶಿಕ್ಷಣ ಸಂಸ್ಥೆಯ ಮಾನ್ಯತೆಯನ್ನು ಪಡೆಯತಕ್ಕದ್ದು.

ಪಿ.ಆರ್. 469

ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

